# ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ

ಮಹೇಶ್ ಕುಮಾರ್. ಡಿ.ಹೆಚ್.

ಮಾರ್ಗದರ್ಶಕರು

ಡಾ. ಸಿ.ಮಹದೇವ

ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯- ೧೦

# ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ

**ಮಹೇಶ್ ಕುಮಾರ್. ಡಿ.ಹೆಚ್.**

ನೋಂದಣಿ ಸಂಖ್ಯೆ : KVAH-00432

ಮಾರ್ಗದರ್ಶಕರು

ಡಾ. ಸಿ.ಮಹದೇವ

ಪ್ರಾಧ್ಯಾಪಕರು






ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯- ೧೦

801A

# ಪ್ರಮಾಣ ಪತ್ರ

"ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ" ಎಂಬ ಸಂಪ್ರಬಂಧವನ್ನು ಡಾ.ಸಿ.ಮಹದೇವ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನದ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲದ್ದಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮಹೇಶ್‌ಕುಮಾರ್ ಡಿ.ಹೆಚ್.
ಸಂಶೋಧಕ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : 14-09-10
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

"ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ತ್ವ" ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ **ಶ್ರೀ ಮಹೇಶ್‌ಕುಮಾರ್ ಡಿ.ಹೆಚ್.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲದ್ದಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

14/9/10

**(ಡಾ.ಸಿ. ಮಹದೇವ)**
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : 14-9-10
ಸ್ಥಳ : ವಿದ್ಯಾರಣ್ಯ

## ಪರಿವಿಡಿ

# ತುಮಕೂರು ಜಿಲ್ಲೆ


ಪಾವಗಡ
ಚಿತ್ರದುರ್ಗ ಜಿಲ್ಲೆ
ಅನಂತಪುರ ಜಿಲ್ಲೆ
ಶಿರಾ
ಮಧುಗಿರಿ
ಕೋಲಾರ ಜಿಲ್ಲೆ
ಚನ್ನರಾಯನ ದುರ್ಗ
ಕೊರಟಗೆರೆ
ಚಿಕ್ಕಮಗಳೂರು ಜಿಲ್ಲೆ
ಚಿಕ್ಕನಾಯಕನಹಳ್ಳಿ
ಗುಬ್ಬಿ
ತಿಪಟೂರು
ತುಮಕೂರು
ಬೆಂಗಳೂರು ಜಿಲ್ಲೆ
ತುರುವೇಕೆರೆ
ಉ
ಪ.
ಪೂ.
ದ.
ಕುಣಿಗಲ್ಲು
ಮಂಡ್ಯ ಜಿಲ್ಲೆ

# ಅಧ್ಯಾಯ -ಒಂದು

## ಪ್ರಸ್ತಾವನೆ

ಭಾರತ ದೇಶದಂತಹ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ಪುನರ್ ರಚಿಸುವ ಕೆಲಸ ಜರೂರಾಗಿ ಆಗಬೇಕಿದೆ. ಕರ್ನಾಟಕವು ಕಾವೇರಿಯಿಂದ ಗೋದಾವರಿ ನದಿಯವರೆಗೂ ವಿಶಾಲವಾಗಿತ್ತೆಂದು ಶ್ರೀ ವಿಜಯನ ಕವಿರಾಜಮಾರ್ಗ ಎಂಬ ಕೃತಿಯಲ್ಲಿ ತಿಳಿಸಲಾಗಿದೆ. ಇತಿಹಾಸ ಪೂರ್ವ ಹಾಗು ಇತಿಹಾಸ ಕಾಲದ ಅವಶೇಷಗಳು ಕರ್ನಾಟಕದಾದ್ಯಂತ ಹರಡಿವೆ. ಈ ಅವಶೇಷಗಳು ಅಂದಿನ ಮಾನವನು ಬದುಕಿ ಬಾಳಿದ, ಆತನು ನಡೆದು ಬಂದ ದಾರಿಯ ಕಿರುನೋಟವನ್ನು ನಮಗೆ ಸ್ಪಷ್ಟಪಡಿಸುತ್ತವೆ. ಇಂತಹ ಅವಶೇಷಗಳ ಅನ್ವೇಷಣೆ, ಶೋಧನೆ, ಸಂಗ್ರಹಣೆ, ವಿಶ್ಲೇಷಣೆ ಮತ್ತು ಪ್ರಕಟಣೆಯು ಗ್ರಾಮಗಳಿಂದ ಆರಂಭವಾಗಬೇಕಿದೆ. ಆಗ ಮಾತ್ರ ನಾಡಿನ ಸಾಂಸ್ಕೃತಿಕ ಇತಿಹಾಸದ ಬಹುಮುಖ ಚಿತ್ರಣವನ್ನು ವಸ್ತುನಿಷ್ಠವಾಗಿ ಪುನರ್ ರಚಿಸಬಹುದು. ಅಲ್ಲದೆ ಇತಿಹಾಸದಲ್ಲಿ ಕಳೆದುಹೋದ ಕೊಂಡಿಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ ಈ ನಿಟ್ಟಿನಲ್ಲಿ ಶಾಸನಗಳು ನಾಣ್ಯಗಳು, ಸ್ಮಾರಕಗಳು ಹಾಗು ಸಾಹಿತ್ಯಾಧಾರಗಳು ಉಪಯುಕ್ತವಾಗುತ್ತವೆ.

ಕರ್ನಾಟಕದ ಪ್ರತಿಯೊಂದು ಗ್ರಾಮಗಳು ಚಾರಿತ್ರಿಕವಾಗಿ ಹಾಗು ಸಾಂಸ್ಕೃತಿಕವಾಗಿ ವಿಪುಲ ಸಾಮಗ್ರಿಗಳನ್ನು ತಮ್ಮಲ್ಲಿ ಒಳಗೊಂಡಿವೆ. ಇಲ್ಲಿಯ ಆಕರಗಳು ಈ ನಾಡಿನ ಸಮಗ್ರ ಇತಿಹಾಸದ ರಚನೆಗೆ ಸಹಾಯಕವಾಗಿವೆ. ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆ ಸಾಕಷ್ಟು ಕೃತಿಗಳು ರಚನೆಯಾಗಿದ್ದರೂ ಪ್ರಾದೇಶಿಕವಾಗಿ ಹಾಗು ಸ್ಥಳೀಯವಾಗಿ ಆಗಿರುವ ಕೆಲಸ ತೃಪ್ತಿಕರವಾಗಿಲ್ಲ. ಈ ನಿಟ್ಟಿನಲ್ಲಿ "ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ " ಎಂಬ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ತುಮಕೂರು ಜಿಲ್ಲೆ ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಈ ನಿಟ್ಟಿನಲ್ಲಿ ನೋಡಿದಾಗ ಅಧ್ಯಯನ ಮಾಡುವುದು ಅತೀ ಅವಶ್ಯಕವೆನಿಸುತ್ತದೆ. ಒಂದು ಪ್ರದೇಶದ ಇತಿಹಾಸ ರಚನೆಯಲ್ಲಿ ಅಲ್ಲಿನ ಐತಿಹ್ಯಗಳು ಕೂಡ ಇತಿಹಾಸದ ಆಕಾರಗಳಾಗುತ್ತವೆ. ಆದ್ದರಿಂದ ಮೌಖಿಕ ಪರಂಪರೆಗೆ ಮನುಷ್ಯನ ಚಟುವಟಿಕೆಗಳನ್ನು ಜೀವಂತವಾಗಿ ಉಳಿಸಿಕೊಂಡು ಬರುವ ಶಕ್ತಿ ಇದ್ದರೆ, ಪುರಾತತ್ವಕ್ಕೆ ಭೌತಿಕವಾಗಿ ಉಳಿದುಕೊಂಡು ಬಂದ ಹೆಗ್ಗಳಿಕೆ ಇದೆ.

ಆದ್ದರಿಂದ ಪುರಾತತ್ವ ಮತ್ತು ಐತಿಹ್ಯಗಳ ಸಮೀಕರಣದ ಮೂಲಕ ಅಧ್ಯಯನ ಕೈಗೊಳ್ಳುವ ಅವಶ್ಯಕತೆ ಇದೆ. ಪ್ರಸ್ತುತ ಅಧ್ಯಯನದ ಕ್ಷೇತ್ರವಾದ ಚನ್ನರಾಯನ ದುರ್ಗ ಪರಿಸರದಲ್ಲಿ ಲಿಖಿತವಾಗಿರುವ ಹಾಗು ಪ್ರತ್ಯೇಕ್ಷವಾಗಿರುವ ಪುರಾತತ್ವ ಆಕರಗಳ ಜೊತೆಗೆ ಆ ಪ್ರದೇಶದಲ್ಲಿ ಜನಮಾನಸದಲ್ಲಿ ಗುಪ್ತ ಗಾಮಿನಿಯಾಗಿ ಹರಡಿಕೊಂಡಿರುವ ಐತಿಹ್ಯಗಳು ಇತಿಹಾಸದ ರಚನೆಗೆ ಸಹಾಯಕವಾಗಿವೆ.

ಪ್ರಸ್ತುತ ಅಧ್ಯಯನದ ವಿಷಯವು "ಚನ್ನರಾಯನದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ" ಆಗಿದ್ದು ಚನ್ನರಾಯನದುರ್ಗವು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ೪ ಹೋಬಳಿ ಕೇಂದ್ರಗಳಲ್ಲಿ ಒಂದಾಗಿದೆ. ಇದು ತುಮಕೂರು ಜಿಲ್ಲೆಯ ಈಶಾನ್ಯ ಭಾಗಕ್ಕಿದ್ದು ಪಶ್ಚಿಮದಲ್ಲಿ ಚಿತ್ರದುರ್ಗ ಜಿಲ್ಲೆ, ಪೂರ್ವಕ್ಕೆ ಕೋಲಾರ ಜಿಲ್ಲೆ, ದಕ್ಷಿಣಕ್ಕೆ ಬೆಂಗಳೂರು ಜಿಲ್ಲೆ, ಉತ್ತರಕ್ಕೆ ಅನಂತಪುರ ಜಿಲ್ಲೆಯನ್ನು ಒಳಗೊಂಡಿದೆ. ಇದು ಪೂರ್ವಭಾಗದ ಕಡೆಗೆ ಜಿಲ್ಲೆಯ ಗಡಿ ತಾಲ್ಲೂಕಾಗಿದೆ. ಚನ್ನರಾಯನದುರ್ಗವು ಜಿಲ್ಲೆಯ ಕೇಂದ್ರದಿಂದ ೩೫ ಕಿ.ಮೀ. ದೂರದಲ್ಲಿದೆ. ಈ ಪರಿಸರವು ಬೆಟ್ಟಗುಡ್ಡಗಳಿಂದ ಆವೃತ್ತವಾಗಿದ್ದು ಕಣಶಿಲೆ ಬೆಟ್ಟಗಳು ಹೆಚ್ಚು ಕಂಡುಬರುತ್ತವೆ. ಈ ತಾಲ್ಲೂಕಿನಲ್ಲಿ ಸುವರ್ಣಮುಖಿ ನದಿ ಹುಟ್ಟಿ ಹರಿಯುತ್ತದೆ. ಜೊತೆಗೆ ಗರುಡಾಚಲ, ಜಯ ಮತ್ತು ಮಂಗಲಿ ನದಿಗಳು ಹರಿಯುತ್ತವೆ. ಈ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಬೆಟ್ಟಗಳೆಂದರೆ ಚನ್ನರಾಯನದುರ್ಗ, ಕೊರಟಗೆರೆ ಬೆಟ್ಟ, ಸಿದ್ದರ ಬೆಟ್ಟ, ಮಧುಗಿರಿ ಬೆಟ್ಟಗಳಾಗಿವೆ.

ಈ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಪ್ರಾಗಿತಿಹಾಸಿಕ ನೆಲೆಗಳೆಂದರೆ ಸಿದ್ದರಬೆಟ್ಟ, ಬುಕ್ಕಾಪಟ್ಟಣ, ದೊಡ್ಡ ಪಾಲನಹಳ್ಳಿ, ತಣ್ಣೇನಹಳ್ಳಿಗಳಾಗಿವೆ. ಅದೇ ರೀತಿ ಇತಿಹಾಸ ಕಾಲಕ್ಕೆ ಸಂಬಂಧಿಸಿದ ಸ್ಥಳಗಳೆಂದರೆ ತುಂಬಾಡಿ, ಕೊರಟಗೆರೆ, ಸಿದ್ದರಬೆಟ್ಟ, ಮರೇನಾಯಕನಹಳ್ಳಿ, ಬಂಡೇಹಳ್ಳಿ, ಜೋನಿಗರಹಳ್ಳಿ, ತೋವಿನಕೆರೆ, ಕುರಂಕೋಟೆ, ಹೊಲತಾಳು, ಜುಂಜುರಾಮನ ಹಳ್ಳಿಗಳಾಗಿವೆ. ಈ ಪ್ರದೇಶವು ಗಂಗರ ಕಾಲದಿಂದ ವಿಜಯನಗರ ಕಾಲದ ವರೆಗೂ ಹಾಗು ಹೊಳವನಹಳ್ಳಿ ಪಾಳೆಗಾರರ ಆಳ್ವಿಕೆಗೆ ಒಳಪಟ್ಟಿದ್ದು, ಆ ಕಾಲದ ದೇವಾಲಯಗಳು, ಶಾಸನಗಳು, ಶಿಲ್ಪಗಳು, ಸ್ಮಾರಕ ಅವಶೇಷಗಳನ್ನು ಒಳಗೊಂಡಿದೆ. ಜತೆಗೆ ಸ್ಥಳೀಯವಾಗಿ ದೊರೆಯುವ ಮೌಖಿಕ ಆಕರಗಳು ಪ್ರಮುಖವಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಪರಿಸರವು ಹೋಬಳಿ ಕೇಂದ್ರವಾಗಿದ್ದು, ೩೮ ಗ್ರಾಮಗಳನ್ನು ಒಳಗೊಂಡಿದೆ. ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವದ ಅವಶೇಷಗಳನ್ನು ಬಳಸಿಕೊಂಡು ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಅಧ್ಯಯನದ ಉದ್ದೇಶ**

ಸಾಮಾನ್ಯವಾಗಿ ಯಾವುದೇ ಒಂದು ಅಧ್ಯಯನವು ನಿರ್ದಿಷ್ಟವಾದ ಉದ್ದೇಶವನ್ನು ಒಳಗೊಂಡಿರುತ್ತದೆ. ನಿರ್ದಿಷ್ಟವಾದ ಉದ್ದೇಶ ಒಳಗೊಂಡಿಲ್ಲದಿದ್ದರೆ ಅದು ವ್ಯವಸ್ಥಿತ ಅಧ್ಯಯನ ಎನಿಸುವುದಿಲ್ಲ. ಅಧ್ಯಯನದ ಉದ್ವೇಶವು ಯಾವಾಗಲೂ ತನ್ನದೇ ಆದ ಗುರಿಯನ್ನು ಹೊಂದಿರಬೇಕು. ಗುರಿ ಎಂದರೆ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡು ಅಲ್ಲಿ ಉದ್ಭವಿಸುವ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರ ಹುಡುಕುವುದೇ ಸಂಶೋಧನೆಯ ಮುಖ್ಯ ಉದ್ವೇಶವಾಗಿದೆ. ಅಧ್ಯಯನದ ಉದ್ದೇಶಗಳು ಯಾವಾಗಲೂ ಸಂಶೋಧನಾ ಕೆಲಸಕ್ಕೆ ಮಾರ್ಗಸೂಚಿಯಾಗಿ ಕಾರ್ಯ ನಿರ್ವಹಿಸುವಂತಿರಬೇಕು. ಆಗಿದ್ದಲ್ಲಿ ಮಾತ್ರ ವ್ಯವಸ್ಥಿತ ಅಧ್ಯಯನವಾಗುತ್ತದೆ.

ಪ್ರಸ್ತುತ ಅಧ್ಯಯನ ವಿಷಯವು "ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ" ಆಗಿದ್ದು, ಅಧ್ಯಯನದ ಉದ್ವೇಶವು ಅಲ್ಲಿನ ಇತಿಹಾಸ ಮತ್ತು ಪುರಾತತ್ವವನ್ನು ಕುರಿತಂತೆ ವ್ಯವಸ್ಥಿತವಾದ ಅಧ್ಯಯನವನ್ನು ಕೈಗೊಳ್ಳುವುದೇ ಆಗಿದೆ. ಜೊತೆಗೆ ಸಾವಿರಾರು ವರ್ಷಗಳಿಂದ ಉಳಿದುಕೊಂಡು ಬಂದಿರುವ ಮೌಖಿಕ ಆಕರಗಳ ಸಮಗ್ರ ಹಾಗು ಸೂಕ್ಷ್ಮ ಅಧ್ಯಯನ ಕೈಗೊಂಡು ಪ್ರಮುಖ ಅಂಶಗಳನ್ನು ಗುರುತಿಸಲಾಗುವುದು. ಜತೆಗೆ ಈ ವರೆಗಿನ ಇತಿಹಾಸ ಮತ್ತು ಪುರಾತತ್ವದ ಬಗ್ಗೆ ದಾಖಲಾಗಿರುವ ಸಂಗತಿಗಳನ್ನು ಇಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಈ ಪರಿಸರದಲ್ಲಿ ಹಳೆ ಶಿಲಾಯುಗದಿಂದ ಇತಿಹಾಸ ಆರಂಭದವರೆಗಿನ ಅವಶೇಷಗಳು ದೊರೆತಿದ್ದು, ಇವುಗಳ ಆಧಾರದಿಂದ ಹೊಸ ಹೊಸ ನೆಲೆಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ. ಇಲ್ಲಿನ ಕೋಟೆಗೆ ಹೊಂದಿಕೊಂಡಂತೆ ಇದರ ಇತಿಹಾಸ ಅಲ್ಲಿನ ಪ್ರಾಚೀನ ದೇವಾಲಯಗಳ ಕಲೆ, ವಾಸ್ತುಶಿಲ್ಪ, ಮೂರ್ತಿ ಶಿಲ್ಪ, ರಕ್ಷಣಾ ವಾಸ್ತು, ನೀರಿನ ಆಶ್ರಯ ತಾಣಗಳು ,ಅರಮನೆಯ ಅವಶೇಷಗಳು ಅಂದಿನ ಕಾಲದ ಬಗ್ಗೆ ತಿಳಿಸುವ ತಾಳಪತ್ರ ಶಾಸನಗಳು, ಚಿತ್ರಕಲೆ, ಶಿಲ್ಪ ಕಲೆಗಳನ್ನು ವಿಶ್ಲೇಷಿಸುವುದಾಗಿದೆ ಹಾಗು ಪ್ರಾಚೀನ ಸ್ಮಾರಕ ಮತ್ತು ಶಿಲ್ಪಗಳ ಸಂರಕ್ಷಣೆಯ ಬಗ್ಗೆ ಸ್ಥಳೀಯರಿಗೆ ತಿಳಿಯುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಯಾವುದೇ ವಿಷಯವನ್ನು ಕುರಿತು ಕೈಗೊಳ್ಳುವ ಅಧ್ಯಯನವು ಸೂಕ್ಷ್ಮವು ಸಮಗ್ರವೂ, ಅಡಕವೂ, ಆಗಿರಬೇಕೆಂದರೆ ಅದನ್ನು ಒಂದು ನಿರ್ದಿಷ್ಟ ವ್ಯಾಪ್ತಿಗೆ ಅಳವಡಿಸಿಕೊಳ್ಳಬೇಕಾಗುತ್ತದೆ. ಇಲ್ಲಿ ನಿರ್ದಿಷ್ಟ ವ್ಯಾಪ್ತಿ ಎಂದರೆ, ಎಲ್ಲೆ, ಮೇರೆ, ಚೌಕಟ್ಟು ಎಂಬ ಅರ್ಥವನ್ನು ಸೂಚಿಸುತ್ತದೆ. ಅದರೊಳಗೆ ನಡೆಸಿದ ಅಧ್ಯಯನವು ವ್ಯವಸ್ಥಿತವಾದ ಅಧ್ಯಯನವಾಗಿ ಹೊರ ಹೊಮ್ಮಲು ಸಾಧ್ಯವಾಗುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಹೋಬಳಿ ಕೇಂದ್ರಗಳಲ್ಲಿ ಒಂದಾದ ಚನ್ನರಾಯನದುರ್ಗ ಪರಿಸರವನ್ನು ಅದರ ಭೌಗೋಳಿಕ ಮತ್ತು ಕಾಲಾವದಿಯ ದೃಷ್ಟಿಯಿಂದ ಸೀಮಿತಗೊಳಿಸಿ ಆಯ್ದುಕೊಂಡಿದ್ದು, ಅಲ್ಲಿನ ಕೋಟೆ, ದೇವಾಲಯ, ವೀರಗಲ್ಲು , ಶಾಸನಗಳು ಪ್ರಾಗಿತಿಹಾಸಿಕ ನೆಲೆಗಳು, ಐತಿಹಾಸಿಕ ನೆಲೆ, ನೀರಿನ ತಾಣಗಳನ್ನು ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ. ಈ ಪರಿಸರದ ವ್ಯಾಪ್ತಿಗೆ ಸೇರುವ ಸುಮಾರು ೩೮ ಗ್ರಾಮಗಳಲ್ಲಿ ಕೆಲವು ಮಹತ್ವದ ಹಾಗು ಪ್ರಾಚೀನ ಗ್ರಾಮಗಳನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಅಂತಹ ಗ್ರಾಮಗಳೆಂದರೆ ತುಂಬಾಡಿ, ನೇಗಲಾಲ, ಸಿದ್ದರಬೆಟ್ಟ, ಮರೆನಾಯಕನಹಳ್ಳಿ, ಜೋನಿಗರಹಳ್ಳಿ, ಬಂಡೇಹಳ್ಳಿ, ಮಣುವಿನ ಕುರಿಕೆ, ತೋವಿನಕೆರೆ, ಜುಂಜರಾಮನಹಳ್ಳಿ, ಬುಕ್ಕಾಪಟ್ಟಣ, ಹೊಲತಾಳು, ಕೊರಟಗೆರೆ, ಕುರಂಕೋಟೆ, ಚೋಳರಪಾಳ್ಯ, ವಡ್ಡಗೆರೆ ಗ್ರಾಮಗಳು. ಅಲ್ಲಿನ ದೇವಾಲಯಗಳ ಮಹತ್ವ ನಿರ್ಮಾಣ, ಅದರ ಐತಿಹಾಸಿಕ ಮಹತ್ವವನ್ನು ಕಟ್ಟಿಕೊಡುವ ಅಧ್ಯಯನದ ವ್ಯಾಪ್ತಿಯು ಚನ್ನರಾಯನ ದುರ್ಗದ ಸುಮಾರು ೧೫ ಕಿ.ಮೀ. ವ್ಯಾಪ್ತಿಯನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನದ ಕಾಲಾವಧಿಯನ್ನು ಪ್ರಾಗಿತಿಹಾಸ ಕಾಲದಿಂದ ಮೈಸೂರು ಒಡೆಯರ ಆಡಳಿತದ ಕಾಲಘಟ್ಟದ ವರೆಗೆ ಸೀಮಿತಗೊಳಿಸಲಾಗಿದೆ.

ಈ ಹಿಂದೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಅಂತರ್ ಶಿಸ್ತೀಯ ನೆಲೆಯಲ್ಲಿ ಶೋಧಿಸುವ ಸಂಯೋಜಿಸುವ ನಿಟ್ಟಿನಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಚನ್ನರಾಯನ ದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನದಲ್ಲಿ ವಸ್ತು ನಿಷ್ಠತೆಯನ್ನು ಎತ್ತಿ ಹಿಡಿದು ಅಧ್ಯಯನಕ್ಕೆ ಹೊಸ ರೂಪವನ್ನು ನೀಡುವುದಾಗಿದೆ. ಈ ವರೆಗೆ ಹಲವು ವಿದ್ವಾಂಸರು ಹಾಗು ಸಂಶೋಧಕರು ತಮ್ಮ ಅಧ್ಯಯನದ ಪರಿಮಿತಿಯಲ್ಲಿ ಚನ್ನರಾಯನದುರ್ಗದ ಪರಿಸರಕ್ಕೆ ಸಂಬಂಧಿಸಿದಂತೆ ಹಲವು ಹೊಸ ವಿಷಯಗಳನ್ನು ನೀಡಿದ್ದಾರೆ ಅವು ಈ ಕೆಳಗಿನಂತಿವೆ.

ಸಿ.ಎನ್. ಭಾಸ್ಕರಪ್ಪನವರು ಸಂಪಾದಿಸಿದ "ತುಮಕೂರು ಜಿಲ್ಲಾ ದರ್ಶನ" ಎಂಬ ಕೃತಿಯಲ್ಲಿ ಚನ್ನರಾಯನ ದುರ್ಗ ಕೋಟೆಗೆ ಸಂಬಂಧಿಸಿದ ಮಾಹಿತಿಯನ್ನು ನೀಡಲಾಗಿದೆ.[೧] ಇಲ್ಲಿ ಭೌಗೋಳಿಕ ಪರಿಸರ ಮತ್ತು ಕೋಟೆಗಳ ವಿವರವನ್ನು ಸರಳವಾಗಿ ನೀಡಿದ್ದಾರೆ ಆದರೆ ಸೂಕ್ಷ್ಮ ಅಧ್ಯಯನ ಗಮನಿಸಿ ವಿವರಿಸುವ ಹಾಗು ಪುರಾತತ್ವೀಯ ನೆಲೆಯಲ್ಲಿ ಗುರುತಿಸುವ ಕೆಲಸವಾಗಬೇಕಾಗಿದೆ.[೨]

ವೀ ಚಿಕ್ಕವೀರಯ್ಯನವರು ರಚಿಸಿದ "ಸಿದ್ದರಬೆಟ್ಟ ಒಂದು ದರ್ಶನ" ದಲ್ಲಿ ಸಿದ್ದರಬೆಟ್ಟದ ಕೆಲವು ವಿವರಗಳನ್ನು ಈ ಕೃತಿಯಲ್ಲಿ ನೀಡಲಾಗಿದೆ. ಕವಿತಾಕೃಷ್ಣರವರ ಸಂಪಾದನೆಯ "ಜಯಮಂಗಲಿ" ಎಂಬ ಸ್ಮರಣಾ ಸಂಚಿಕೆಯಲ್ಲಿ ಚನ್ನರಾಯನ ದುರ್ಗ ಕೋಟೆ ಹಾಗು ಕೊರಟಗೆರೆ ಕೋಟೆಯ ಬಗ್ಗೆ

ಮಾಹಿತಿಯನ್ನು ನೀಡಿದ್ದಾರೆ.[೩] ಶೀತಾ ಶರ್ಮರವರು ರಚಿಸಿದ ಚಾರಿತ್ರಿಕ ದಾಖಲೆಗಳು ಎಂಬ ಕೃತಿಯಲ್ಲಿ ಚನ್ನರಾಯನದುರ್ಗ ಕೋಟೆ ಹೈದರನು ಕೈವಶವಾದ ಬಗ್ಗೆ ಮಾಹಿತಿ ನೀಡಲಾಗಿದೆ.[೪] ಹಾಗು ಶಿವತಾರ ಕೆ.ವಿ. ರವರು ರಚಿಸಿದ ಕರ್ನಾಟಕದ ಪುರಾತತ್ವ ನೆಲೆಗಳು ಎಂಬ ಕೃತಿಯಲ್ಲಿ ಚನ್ನರಾಯನದುರ್ಗ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದ ನೆಲೆಗಳನ್ನು ಪ್ರಸ್ತಾಪಿಸಿದ್ದಾರೆ.[೫] ಅಲ್ಲದೆ ವಸು ಎಂ.ವಿ. ರವರ ಸಂಪಾದನೆಯಲ್ಲಿ ಮೂಡಿಬಂದ ದಕ್ಷಿಣ ಕರ್ನಾಟಕದ ಅರಸು ಮನೆತನಗಳು ಎಂಬ ಕೃತಿಯಲ್ಲಿ ಕಾವಲಮ್ಮ ಆರ್. ಎಂಬುವರು ಚನ್ನರಾಯನದುರ್ಗ ಕೋಟೆಯ ನಿರ್ಮಾಣದ ಬಗ್ಗೆ ಮಾಹಿತಿ ನೀಡಿದ್ದಾರೆ.[೬] ಶಂಕರನಾರಾಯಣ ಎಂ.ಪಿ. ರವರು ಆವತಿಯ ನಾಡಪ್ರಭುಗಳು ಎಂಬ ಕೃತಿಯಲ್ಲಿ ಹೊಳವನಹಳ್ಳಿ ಸಂಸ್ಥಾನದ ನಿರ್ಮಾಣದ ಬಗ್ಗೆ ಮಾಹಿತಿ ನೀಡಿದ್ದಾರೆ.[೭] ನಂಜುಂಡಪ್ರಸಾದ್ ಕೆ. ಎಂ.ಜಿ.ಮಂಜುನಾಥ್‌ರವರ ಚನ್ನರಾಯನದುರ್ಗದ ಅಪ್ರಕಟಿತ ತಾಮ್ರ ಶಾಸನ ಎಂಬ ಲೇಖನದಲ್ಲಿ ವಿಜಯನಗರಕ್ಕೆ ಸಂಬಂಧಿಸಿದ ಕೂಟ ಶಾಸನದ ಬಗ್ಗೆ ಮಾಹಿತಿ ನೀಡಿದ್ದಾರೆ. ಇದರಲ್ಲಿ ತಿರುಮಲ ರಾಯ ಹಾಗೂ ಕೃಷ್ಣ ದೇವರಾಯನ ಸಹಿ ಹೊಂದಿದ್ದು, ವೀರನು ಹುಲಿ ಹೊಡೆದ ಬಗ್ಗೆ ಮಾಹಿತಿ ತಿಳಿಸುತ್ತದೆ.[೮]

ನಾಗಮಣಿ ಪದ್ಮನಾಭ ಎಂಬುವರು ರಚಿಸಿದ ಕೊರಟಗೆರೆ ತಾಲ್ಲೂಕು ದರ್ಶನ ಎಂಬ ೨೦೦೩ ರ ಸಂಚಿಕೆಯಲ್ಲಿ ತಾಲ್ಲೂಕಿನ ಪ್ರಮುಖ ಸ್ಥಳಗಳ ಬಗ್ಗೆ ಕಿರು ಪರಿಚಯ ನೀಡಿದ್ದಾರೆ.[೯]
ಅಲ್ಲದೆ ಕೆ.ಅಭಿಶಂಕರ್ ರಚಿಸಿದ ತುಮಕೂರು ಜಿಲ್ಲಾ ಗೆಜಿಟಿಯರ್‌ನಲ್ಲಿ ಚನ್ನರಾಯನ ದುರ್ಗ ಕೋಟೆ ಹಾಗೂ ಸುತ್ತಲಿನ ಭೌಗೋಳಿಕ ಅಂಶಗಳನ್ನು ತಿಳಿಸಲಾಗಿದೆ.[೧೦] ಹಾಗು ಲಕ್ಷ್ಮಣ ಸಿ.ಎಂ. ರವರು ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ ಎಂಬ ಕೃತಿಯಲ್ಲಿ ಚನ್ನರಾಯನದುರ್ಗ ಪರಿಸರದ ಭೌಗೋಳಿಕ ಅಂಶಗಳನ್ನು ತಿಳಿಸಿದ್ದಾರೆ.[೧೧] ಈ ಮೇಲಿನ ಎಲ್ಲಾ ಕೃತಿಗಳು ಚರಿತ್ರೆಗೆ ಸಂಬಂಧಿಸಿದಂತೆ ಸಾಕಷ್ಟು ಮಾಹಿತಿ ನೀಡಿದ್ದು, ಆದರೆ ಪ್ರಾದೇಶಿಕ ನೆಲೆಯಲ್ಲಿ ಆಗಿರುವ ಕೆಲಸವು ತೃಪ್ತಿಕರವಾಗಿಲ್ಲ. ಪುರಾತತ್ವ ಆಕರಗಳಷ್ಟೆ ಮಹತ್ವದ ಮತ್ತು ಐತಿಹಾಸಿಕ ಆಕರಗಳಾದ ಮೌಖಿಕ ಪರಂಪರೆ ಹಾಗು ಶಾಸನಗಳನ್ನು ಅಧ್ಯಯನದ ಚೌಕಟ್ಟಿನಲ್ಲಿ ಅಳವಡಿಸಿಕೊಂಡು ಚನ್ನರಾಯನದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ ಎಂಬ ಅಧ್ಯಯನವು ಈ ವರೆಗೆ ಕಂಡು ಬಂದ ಕೊರತೆಯನ್ನು ತುಂಬಿ ಕೊಡುವ ಪ್ರಯತ್ನ ಮಾಡಲಾಗಿದೆ.

## ಅಧ್ಯಯನದ ವಿಧಾನ

ಪುರಾತತ್ವೀಯ ಹಿನ್ನೆಲೆಯನ್ನು ಇಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾಗಿದ್ದು, ಕ್ಷೇತ್ರ ಕಾರ್ಯದ ಮೂಲಕ ಪ್ರಾಥಮಿಕ ಹಾಗು ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಈ ಪರಿಸರದ ವ್ಯಾಪ್ತಿಯಲ್ಲಿ ಬರುವ ಪ್ರತಿ ಗ್ರಾಮಗಳಿಗೆ ಭೇಟಿ ನೀಡಿ ಅಲ್ಲಿನ ಐತಿಹ್ಯ ಹಾಗು ಪುರಾತತ್ವೀಯ ಅಂಶಗಳನ್ನು ಸಮಗ್ರವಾಗಿ ಅವಲೋಕಿಸಿ, ವಿಶ್ಲೇಷಿಸುವ, ಕಾರ್ಯ ವಿಧಾನವನ್ನು ಅಧ್ಯಯನದಲ್ಲಿ ಮಾಡಲಾಗಿದೆ.

ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಪ್ರತಿ ಗ್ರಾಮಗಳಿಗೆ ಬೇಟಿ ನೀಡಿ ಅಲ್ಲಿ ತಿಳಿದು ಬಂದ ವಿವರಗಳನ್ನು ದಾಖಲಿಸಿಕೊಂಡಿದ್ದೇನೆ. ಜೊತೆಗೆ ಈ ಪ್ರದೇಶಕ್ಕೆ ಸಂಬಂಧಿಸಿದ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಅದಕ್ಕೆ ಪೂರಕವಾದ ಮಾಹಿತಿಗಳನ್ನು ಬೇರೆ ಬೇರೆ ನೆಲೆಯಿಂದಲೂ ಪಡೆದು, ಅಲ್ಲದೆ ಕೆಲವು ಸ್ಥಳೀಯ ಸಂಘ ಸಂಸ್ಥೆಗಳಿಂದ ಹಾಗು ಸ್ಥಳೀಯ ವ್ಯಕ್ತಿಗಳಿಂದ ಮಾಹಿತಿ ಪಡೆದು ಚರ್ಚಿಸಲಾಗಿದೆ. ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ಕೆಲವು ಹೊಸ ನೆಲೆಗಳು, ಶಾಸನಗಳು, ತಾಳ ಪತ್ರಗಳು, ಮೂರ್ತಿಶಿಲ್ಪಗಳನ್ನು ಸಂಗ್ರಹಿಸಿ ವಿವರ ಮತ್ತು ಛಾಯಾ ಚಿತ್ರಗಳನ್ನು ಪಡೆದುಕೊಳ್ಳಲಾಗಿದೆ. ಅಲ್ಲದೆ ಪ್ರಾಥಮಿಕ, ಅನುಷಂಗಿಕ ಆಧಾರಗಳು ಎಲ್ಲಾಬಗೆಯ ಸರ್ಕಾರಿ ಕಾಗದಪತ್ರಗಳು, ಸಂದರ್ಶನ, ರಾಜ್ಯ ಪತ್ರಗಾರ ಇಲಾಖೆ, ಲೇಖನ, ನಿಯತಕಾಲಿಕೆಯಲ್ಲಿ ದೊರೆಯುವ ಆಧಾರಗಳನ್ನು ಮತ್ತು ಸಂಶೋಧನಾ ಲೇಖನಗಳನ್ನು ಹಾಗು ಪಿ.ಹೆಚ್‌ಡಿ. ಮಹಾ ಪ್ರಬಂಧಗಳನ್ನು ಆಧರಿಸಿ ಅವಶ್ಯಕ ವಿಷಯಗಳನ್ನು ಪರಿಶೀಲಿಸಿ ವರ್ಗೀಕರಿಸಿಕೊಂಡು, ನಂತರ ವಿಶ್ಲೇಷಣೆ ಮಾಡಲಾಗಿದೆ. ಈ ಮೂಲಕ ಕಂಡುಕೊಂಡ ಸಂಗತಿಗಳನ್ನು ವಿಮರ್ಶಿಸಿ ಈ ಪ್ರಬಂಧದ ಪ್ರಬಂಧದ ಬರಹವನ್ನು ಪೂರ್ಣಗೊಳಿಸಲಾಗಿದೆ.

## ಅಡಿ ಟಿಪ್ಪಣಿ

೧) ಭಾಸ್ಕರಪ್ಪ ಸಿ.ಎನ್., ೧೯೮೧ : ತುಮಕೂರು ಜಿಲ್ಲಾ ದರ್ಶನ, ಪು. ೧೩೨

೨) ಚಿಕ್ಕವೀರಯ್ಯ ವಿ., ೧೯೯೧: ಸಿದ್ಧರಬೆಟ್ಟ ಒಂದು ದರ್ಶನ, ಪು. ೮೬

೩) ಕವಿತಾ ಕೃಷ್ಣ, ೨೦೦೦: ಜಯಮಂಗಲಿ, ಪು. ೧೦೪

೪) ಶರ್ಮ ತಿ.ತಾ., ೧೯೯೦: ಚಾರಿತ್ರಿಕ ದಾಖಲೆಗಳು, ಪು. ೧೮೬

೫) ಶಿವತಾರ.ಕೆ.ಬಿ., ೨೦೦೧: ಕರ್ನಾಟಕದ ಪುರಾತತ್ವ ನೆಲೆಗಳು, ಪು. ೨೭೧

೬) ವಸು. ಎಂ.ವಿ., ೨೦೦೧ : ದಕ್ಷಿಣ ಕರ್ನಾಟಕದ ಅರಸು ಮನೆತನಗಳು , ಪು. ೪೯

೭) ಶಂಕರನಾರಾಯಣ ಎನ್.ಪಿ., ೧೯೭೬ : ಆವತೀಯ ನಾಡ ಪ್ರಭುಗಳು, ಪು. ೪೭

೮) ನಂಜುಂಡಪ್ರಸಾದ್ ಕೆ, ಮಂಜುನಾಥ್ ಎಂ.ವಿ. , ೨೦೦೧: ಚನ್ನರಾಯನದುರ್ಗದ ಅಪ್ರಕಟಿತ ತಾಮ್ರ ಶಾಸನ ಇತಿಹಾಸ ದರ್ಶನ,ಸೂರ್ಯನಾಥ ಕಾಮತ್, (ಸಂ.) ಸಂಪುಟ.೧೬, ಪು. ೪೨

೯) ನಾಗಮಣಿ ಪದ್ಮನಾಭ, ೨೦೦೩: ಕೊರಟಗೆರೆ ತಾಲ್ಲೂಕು ದರ್ಶನ, ಪು. ೧೦

೧೦) ಅಭಿಶಂಕರ್ ಕೆ. , ೧೯೭೬ : ತುಮಕೂರು ಜಿಲ್ಲಾ ಗೆಜಿಟಿಯರ್ , ಪು. ೭೮

೧೧) ಲಕ್ಷ್ಮಣ್ ಸಿ.ಎನ್., ೨೦೦೦: ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ, ಪು. ೪

# ಅಧ್ಯಾಯ -ಎರಡು

## ಭೌಗೋಳಿಕತೆ ಮತ್ತು ಇತಿಹಾಸ

### ೨.೧ ಭೌಗೋಳಿಕ ಪರಿಸರ

ಒಂದು ಪ್ರದೇಶದ ಅಧ್ಯಯನವನ್ನು ಕೈಗೊಳ್ಳುವ ಮೊದಲು ಆ ಪ್ರದೇಶದ ಭೌಗೋಳಿಕ ಸ್ಥಿತಿಗತಿಗಳನ್ನು ತಿಳಿಯುವುದು ಅಗತ್ಯವಾಗಿರುತ್ತದೆ. ಕಾರಣ ಅಲ್ಲಿನ ಮಾನವನ ಜೀವನ ಕ್ರಮದ ಮೇಲೆ ಭೌಗೋಳಿಕ ಅಂಶಗಳು ಅವಲಂಭಿಸಿರುತ್ತವೆ ಈ ಹಿನ್ನೆಲೆಯಲ್ಲಿ ಒಂದು ಪ್ರದೇಶದ ಇತಿಹಾಸ ಅಲ್ಲಿನ ಸಂಸ್ಕೃತಿಯನ್ನು ತಿಳಿಯಲು ಭೌಗೋಳಿಕ ಅಂಶಗಳು ಸಹಾಯಕವಾಗುತ್ತವೆ. ಮಾನವನು ಒಂದು ಪ್ರದೇಶದಲ್ಲಿ ನೆಲೆಯೂರಲು ಅಲ್ಲಿ ಹುಟ್ಟಿ ಹರಿಯುವ ನದಿಗಳು, ಬಯಲು ಪ್ರದೇಶ, ತೀರ ಪ್ರದೇಶ, ಫಲವತ್ತಾದ ಮಣ್ಣು, ಪರ್ವತ ಶ್ರೇಣಿ, ಪ್ರಾಣಿ ಸಂಪತ್ತು, ಖನಿಜ ಸಂಪತ್ತು, ಅರಣ್ಯಸಂಪತ್ತು, ಹವಾಗುಣ, ಅಕ್ಷಾಂಶ, ರೇಖಾಂಶ, ಮಣ್ಣಿನ ರಚನೆ, ಮುಂತಾದ ಭೌಗೋಳಿಕ ಅಂಶಗಳು ಅವಶ್ಯಕವಾಗುತ್ತವೆ. ಸೂಕ್ಷ್ಮವಾಗಿ ಗಮನಿಸಿ ನೋಡುವುದಾದರೆ ಅಂದಿನ ಪ್ರಾಚೀನ ನಾಗರೀಕತೆಗಳೆಲ್ಲವು ಸಾಮಾನ್ಯವಾಗಿ ನದಿ ಬಯಲಿನಲ್ಲಿಯೇ ಉಗಮವಾಗಿರುವುದು ತಿಳಿದು ಬರುತ್ತದೆ. ಚನ್ನರಾಯನ ದುರ್ಗ ಪರಿಸರವನ್ನು ಚರಿತ್ರೆಯ ಅಧ್ಯಯನಕ್ಕೆ ತೊಡಗಿಸುವ ಮೊದಲು ಆ ಪ್ರದೇಶದ ಭೌಗೋಳಿಕ ಅಂಶಗಳು ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿಯುವುದು ಅಗತ್ಯವೆನಿಸುತ್ತದೆ. ಚನ್ನರಾಯನ ದುರ್ಗವು ತುಮಕೂರು ಜಿಲ್ಲೆಗೆ ಸೇರಿದ ಕೊರಟಗೆರೆ ತಾಲ್ಲೂಕಿನ ಹೋಬಳಿ ಕೇಂದ್ರಗಳಲ್ಲಿ ಒಂದಾಗಿದೆ. ಜಿಲ್ಲೆಯು ತುಮಕೂರು, ಕುಣಿಗಲ್ , ತುರುವೇಕೆರೆ, ಚಿಕ್ಕನಾಯಕನಹಳ್ಳಿ, ಗುಬ್ಬಿ,ಶಿರಾ, ಕೊರಟಗೆರೆ, ಮಧುಗಿರಿ, ಪಾವಗಡ ಎಂಬ ಹತ್ತು ತಾಲ್ಲೂಕುಗಳನ್ನು ಒಳಗೊಂಡಿದೆ. ಈ ಮೊದಲು ಕೊರಟಗೆರೆಯು ಮಧುಗಿರಿ ತಾಲ್ಲೂಕಿನಲ್ಲೂ ತುರುವೇಕೆರೆ, ತಿಪಟೂರು ತಾಲ್ಲೂಕಿನಲ್ಲಿ ವಿಲೀನವಾಗಿದ್ದು, ೧೯೨೮ ರಲ್ಲಿ ಪ್ರತ್ಯೇಕ ತಾಲ್ಲೂಕುಗಳಾಗಿವೆ.[೧]

ಕೊರಟಗೆರೆ ತಾಲ್ಲೂಕು ವಿಸ್ತೀರ್ಣದಲ್ಲಿ ೬೪೮.೧ ಚ.ಕಿ.ಮೀ. ೨೫೧ ಗ್ರಾಮಗಳನ್ನು ಒಳಗೊಂಡು ಮಧುಗಿರಿ ಉಪವಿಭಾಗಕ್ಕೆ ಸೇರಿದೆ. ಈ ತಾಲ್ಲೂಕಿನ ದಕ್ಷಿಣಕ್ಕೆ ತುಮಕೂರು, ಪಶ್ಚಿಮಕ್ಕೆ ಶಿರಾ ತಾಲ್ಲೂಕು, ಉತ್ತರಕ್ಕೆ ಮಧುಗಿರಿ ಹಾಗು ಪೂರ್ವಕ್ಕೆ ಕೋಲಾರ ಜಿಲ್ಲೆ ಇವುಗಳಿಂದ ಸುತ್ತುವರಿದಿದೆ. ಕೊರಟಗೆರೆ ತಾಲ್ಲೂಕು ಆಡಳಿತದ ಅನುಕೂಲಕ್ಕಾಗಿ ೪ ಹೋಬಳಿ ಕೇಂದ್ರಗಳನ್ನಾಗಿ ಮಾಡಿಕೊಂಡಿದೆ. ಅವುಗಳೆಂದರೆ ಕೊರಟಗೆರೆ, ಹೊಳವನಹಳ್ಳಿ, ಕೋಳಾಲ, ಚನ್ನರಾಯನ ದುರ್ಗ.[೨] ಕೊರಟಗೆರೆಯ ಅಕ್ಷಾಂಶವು ೧೩.೦೭೭° ಇದ್ದು ರೇಖಾಂಶವು ೧೨. ೧/೨ ರ ಮಧ್ಯದಲ್ಲಿದ್ದು, ಸಾಧಾರಣ ಬಿಸಿಲಿನ ತಾಪ ಹೊಂದಿರುವ ಪರಿಸರವಾಗಿದೆ.

ಕೊರಟಗೆರೆ ತಾಲ್ಲೂಕಿನ ಜನಸಂಖ್ಯೆಯು ೨೦೦೧ ರ ಜನಗಣತಿಯ ಪ್ರಕಾರ ೨,೩೨,೦೦೦ ಇದ್ದು, ಇದರಲ್ಲಿ ಪುರುಷರು ಶೇ. ೫೧ ರಷ್ಟಿದ್ದು ಜಿಲ್ಲೆಯ ಸರಾಸರಿ ಬೆಳವಣಿಗೆಗಿಂತ ಹೆಚ್ಚಿದೆ. ಮಹಿಳೆಯರು ೪೯% ಇದ್ದಾರೆ. ಪುರುಷರ ಸಾಕ್ಷರತೆಯ ಪ್ರಮಾಣ ಶೇ. ೨೯ ಇದ್ದರೆ, ಸ್ತ್ರೀಯರ ಸಾಕ್ಷರತೆಯ ಪ್ರಮಾಣ ೩೨ ರಷ್ಟಿದೆ. ಶೇ. ೧೪ ರಷ್ಟು ಭಾಗ ೬ ವರ್ಷಕ್ಕಿಂತ ಕೆಳಮಟ್ಟದ ವಯಸ್ಸಿನ ಮಕ್ಕಳಿದ್ದಾರೆ.[೩] ಜಿಲ್ಲೆಯ ಮಹಿಳಾ ಜನಸಂಖ್ಯೆಯನ್ನು ಹೋಲಿಕೆ ಮಾಡಿದಾಗ ಶೇ. ೨ ರಷ್ಟು ಕೊರಟಗೆರೆ ತಾಲ್ಲೂಕಿನಲ್ಲಿ ಹೆಚ್ಚಳ ಕಂಡುಬಂದಿದೆ.

ಈ ಪರಿಸರವು ಅಲ್ಲಲ್ಲಿ ಬೆಟ್ಟ ಗುಡ್ಡಗಳಿಂದ ಆವೃತ್ತವಾದ ಬಯಲು ಪ್ರದೇಶವಾಗಿದೆ. ಇಲ್ಲಿನ ಭೂಮಿಯು ಹೆಚ್ಚು ಕೆಂಪು ಮಣ್ಣಿನಿಂದ ಕೂಡಿದ ಭಾಗವಾಗಿದ್ದು, ಅಲ್ಲಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣು, ಕಪ್ಪು ಮಣ್ಣು ಹಾಗು ದಿಬ್ಬಗಳಿಂದ ಕೂಡಿದ ಪ್ರದೇಶವಾಗಿದೆ. ಈ ಪರಿಸರವು ಬೃಹತ್ತಾದ ಕಣಶಿಲೆ ಬೆಟ್ಟಗಳ ಸಾಲುಗಳಿಂದಲೂ ಕೆಲವು ಭಾಗ ಸಮದಟ್ಟಾದ ಭೂಮಿಯಿಂದ ಆವೃತ್ತವಾಗಿದೆ. ತಾಲ್ಲೂಕಿನಲ್ಲಿ ಮೈದಾನ ಪ್ರದೇಶವು ಹೆಚ್ಚಿನ ಪ್ರಮಾಣದಲ್ಲಿದ್ದು ಇಳಿಜಾರಾಗಿ ೬೫೦ ಮೀ ಸರ್ವೋನ್ನತ ರೇಖೆಯಿಂದ ಆವೃತವಾಗಿದೆ.[೪] ತಾಲ್ಲೂಕಿನಾದ್ಯಂತ ಅಲ್ಲಲ್ಲಿ ಬೆಟ್ಟಗಳ ಸಾಲು ಕಂಡುಬಂದಿದ್ದು ಇವುಗಳು ಅಗ್ನಿಶಿಲೆಯ ಮಾದರಿಯ ಗ್ರಾನೈಟ್ ಮತ್ತು ಕ್ಲೋಸ್ ಪೇರ್ ಗ್ರಾನೈಟ್ ಶಿಲೆಗಳ ಗುಂಪಿಗೆ ಸೇರಿದ ಬೃಹತ್ ಗಾತ್ರದ ಬಂಡೆಗಳಿಂದ ಕೂಡಿದೆ. ಕ್ಲೋಸ್ ಪೇಟ್, ಗ್ರಾನೈಟ್‌ಗಳು ಗುಂಡಾದ ಉಬ್ಬು ಮತ್ತು ಅರ್ಧ ಗೋಳಗಳ ಕಿರಿ ವಯಸ್ಸಿನ ಒರಟು ಹರಳಿನ ಪೊಟ್ಯಾಸಿಕ್. ಗ್ರಾನೈಟ್‌ಗಳ ಸರಣಿಗೆ ಕ್ಲೋಸ್ ಪೇಟ್ ಗ್ರಾನೈಟ್ ಎಂದು ಹೆಸರು. ಈ ಒರಟು ಹರಳಿನ ಗ್ರಾನೈಟ್‌ಗಳು ೧೦ ಕಿ.ಮೀ. ಅಗಲದ ಪಟ್ಟಿಕೆಗೆ ಸೀಮಿತವಾಗಿವೆ. ಇಂತಹ ಶಿಲೆಗಳು ಈ ಪರಿಸರದಲ್ಲಿ ಹೆಚ್ಚು ಕಂಡು ಬರುತ್ತವೆ.[೫] ಈ ಶಿಲೆಗಳಿಂದ ಅತ್ಯಂತ ರಮ್ಯವಾದ ದೃಶ್ಯಗಳನ್ನು ರೂಪಿಸುವ ಶಿಲಾ ಪುಂಜಗಳೆಂದು ಈ ಗ್ರಾನೈಟ್ ಸಮುಚ್ಛಯವನ್ನು ಕರೆಯಬಹುದಾಗಿದೆ.

ಚನ್ನರಾಯನ ದುರ್ಗ ಪರಿಸರದಲ್ಲಿ ಕಂಡು ಬರುವ ಗಿರಿಗಳ ಬಗ್ಗೆ ತಿಳಿಯುವುದಾದರೆ ಪ್ರಮುಖವಾಗಿ ಕೊರಟಗೆರೆ ಬೆಟ್ಟ. ಇದು ೮೭೯ ಮೀಟರ್ ಎತ್ತರವಿದ್ದು ಸಾಧಾರಣ ಗಾತ್ರದ ಕಲ್ಲಿನಿಂದ ಒಳಗೊಂಡು ಬೃಹತ್ ಬಂಡೆಗಳಿಂದಲೂ ಕೂಡಿದೆ. ಈ ಬೆಟ್ಟದ ಮದ್ಯದಲ್ಲಿ ಹೊಳವನಹಳ್ಳಿ ಪಾಳೆಗಾರರು ನಿರ್ಮಿಸಿದ ಗವಿ ಗಂಗಾಧರೇಶ್ವರ ದೇವಾಲಯ ಹಾಗು ಕೋಟೆಯನ್ನು ಒಳಗೊಂಡಿದೆ.[೬] ಈ ಪರಿಸರದಲ್ಲಿ ಬರುವ ಮತ್ತೊಂದು ಬೆಟ್ಟ ಎಂದರೆ ಸಿದ್ದರಬೆಟ್ಟ ಇದು ಐತಿಹಾಸಿಕ ಮಹತ್ವವನ್ನು ಹೊಂದಿದ್ದು ೧೬೨೦ ರ ಆಸು ಪಾಸಿನಲ್ಲಿ ನಿರ್ಮಾಣವಾದ ಕುರಂಗರಾಯನ ಕೋಟೆ ಹಾಗು ಆತ ನಿರ್ಮಿಸಿದ ಕೆರೆ ಇದೆ. ಸಿದ್ದರ ಬೆಟ್ಟವು ಅನೇಕ ಗಿಡ ಮೂಲಿಕೆಗಳ ತಾಣವಾಗಿದ್ದು ಸಿದ್ಧರ ತಪೋವನವಾಗಿ ಇಂದಿಗೂ ಉಳಿದಿದೆ. ಮತ್ತೊಂದು ಪ್ರಮುಖ ಬೆಟ್ಟವೆಂದರೆ ಚನ್ನರಾಯನದುರ್ಗ. ಇದು ೧,೧೩೮ ಮೀ. ಎತ್ತರ ಹೊಂದಿದ್ದು

ಸಮುದ್ರ ಮಟ್ಟದಿಂದ ೩೭೩೪ ಅಡಿಗಳ ಎತ್ತರದಲ್ಲಿರುವುದನ್ನು ಕಾಣಬಹುದಾಗಿದೆ.[೭] ಅಲ್ಲದೆ ತನ್ನ ಸುತ್ತ ಮುತ್ತಲ ಬೆಟ್ಟಗಳಾದ, ಈಶ್ವರನ ಬೆಟ್ಟ, ಕೋಳಿಕಲ್ಲು, ಬಮ್ಮದೇವರ ಗುಡ್ಡು, ಶ್ರವಣೇರಿ ಬೆಟ್ಟಗಳಿಗಿಂತ ಭಿನ್ನವಾಗಿದೆ.

ಚನ್ನರಾಯನ ದುರ್ಗ ಬೆಟ್ಟ ಇತರೆ ಬೆಟ್ಟಗಳಿಗಿಂತ ವಿಶಿಷ್ಟವಾದ ಗುಣವನ್ನು ಒಳಗೊಂಡಿದೆ. ವಿಶಾಲವಾದ ಪ್ರಾಕೃತಿಕ ಬಂಡೆಗಳು ಎತ್ತರವಾದ ಗುಂಡುಗಳಿಂದ ಪ್ರಾಕೃತಿಕವಾಗಿ ರಕ್ಷಣೆ ಪಡೆದಿದ್ದು, ಇಲ್ಲಿನ ಗುಂಡುಗಳು ಸುಮಾರು ೭೦ ರಿಂದ ೧೦೦ ಅಡಿ ಎತ್ತರದ ಹೆಬ್ಬಂಡೆಗಳಿಂದ ಕೂಡಿದ್ದು, ಗೆರಿಲ್ಲಾ ಯುದ್ಧನೀತಿಯನ್ನು ಅನುಸರಿಸಲು ಸೂಕ್ತ ಸ್ಥಳವಾಗಿದೆ. ಅಲ್ಲದೆ ಸುತ್ತಲಿನ ಬೆಟ್ಟಗಳಿಗಿಂತ ಎತ್ತರವಾಗಿದ್ದು ದೂರದ ಶತ್ರು ಸೈನ್ಯವನ್ನು ಸುಲಭವಾಗಿ ಗುರ್ತಿಸಲು ಸಹಾಯಕವಾಗಿದೆ.

ಈ ಪರಿಸರದಲ್ಲಿ ಫೆಬ್ರವರಿಯಿಂದ ಏಪ್ರಿಲ್ ತಿಂಗಳವರೆಗೆ ಗಾಳಿಯು ಚಲನೆಯಲ್ಲಿ ನಿಧಾನವಾಗಿ ಬದಲಾವಣೆ ಉಂಟಾಗುತ್ತದೆ. ಬೆಳಗಿನ ಹೊತ್ತಿನಲ್ಲಿ ನೈರುತ್ಯ ದಿಕ್ಕಿನಿಂದ ಪಶ್ಚಿಮದ ದಿಕ್ಕಿಗೆ, ಸಂಜೆಯ ವೇಳೆಯಲ್ಲಿ ಈಶಾನ್ಯದಿಂದ ನೈರುತ್ಯ ದಿಕ್ಕಿಗೆ ಗಾಳಿಯು ಚಲಿಸುತ್ತದೆ. ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ ಆಗಾಗ ಬಿರುಸಿನಿಂದ ಕೂಡಿದ ಗಾಳಿ ಉಂಟಾಗಿ ಏಪ್ರಿಲ್, ಮೇ, ಜೂನ್ ಮೊದಲಭಾಗದ ಹೊತ್ತಿಗೆ ಹೆಚ್ಚು ಬಿರುಸಿನಿಂದ ಗಾಳಿ ಬೀಸುತ್ತದೆ. ಮಾನ್ಸೂನ್ ಗಾಳಿಯು ಗುಡುಗು ಸಿಡಿಲುಗಳಿಂದ ಕೂಡಿರುತ್ತದೆ. ಸೆಪ್ಟೆಂಬರ್ - ಅಕ್ಟೋಬರ್ ತಿಂಗಳುಗಳಲ್ಲಿ ಬಿರುಗಾಳಿಯು ಕಾಣಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಈ ಕೆಳಗಿನ ಋತುವಿನಂತೆ ಕಂಡು ಬರುತ್ತದೆ.

೧) ಕಾರ್ ಅಥವಾ ಮುಂಗಾರು (ಏಪ್ರಿಲ್ ಮೇ ತಿಂಗಳಿನ ಪೂರ್ವ ಭಾಗ) ಮಳೆಗಾಲ

೨) ಮುಂಗಾರು ಅಥವಾ "ಹೇನ್ ಕಾಲ" ಜುಲೈ ತಿಂಗಳಿಂದ ಪ್ರಾರಂಭವಾಗುತ್ತದೆ.

೩) ಹಿಂಗಾರು ಸಾಮಾನ್ಯವಾಗಿ ಸೆಪ್ಟೆಂಬರ್ ಹಾಗು ಅಕ್ಟೋಬರ್‌ಗಳಲ್ಲಿ ಉಂಟಾಗುತ್ತದೆ. ಈ ಋತುಗಳು ಒಣ ಬೇಸಾಯಕ್ಕೆ ಸಹಾಯಕವಾಗಿದೆ.[೮]

ಒಣ ಬೇಸಾಯಕ್ಕೆ ಸೂಕ್ತವಾದ ಹವಾಮಾನದ ಮುಂಗಾರನ್ನು "ಹೇನ್" ಎಂದು ಕರೆಯುವರು. ಈ ಸಮಯದಲ್ಲಿ ಒಂದು ಬೆಳೆಯನ್ನು ಮಾತ್ರ ಬೆಳೆಯುತ್ತಾರೆ. ಕಾರಣ ಈ ಕಾಲದ ಮಳೆಯು ಬಹು ತಡವಾಗಿ ಸುಗ್ಗಿಯ ಕಾಲಕ್ಕೆ ಬರುವುದರಿಂದ ಹಿಂಗಾರು ಕೃಷಿ ಬಹಳ ಕಡಿಮೆಯೆಂದೇ ಹೇಳಬಹುದು. ಹೆಚ್ಚು ನೀರು ಬೇಡುವ ಭತ್ತವನ್ನು ಕಾರ್ತೀಕ ವೈಶಾಖ ಮಾಸಗಳಲ್ಲಿ ಬೆಳೆಯುತ್ತಾರೆ. ಇದನ್ನು ಜುಲೈನಲ್ಲಿ ಬಿತ್ತಿ ಡಿಸೆಂಬರ್‌ನಲ್ಲಿ ಸುಗ್ಗಿ ಮಾಡುತ್ತಾರೆ. ಎರಡನೇ ಬೆಳೆ ಡಿಸೆಂಬರ್ ತಿಂಗಳಿನ ನಂತರ ಬಿತ್ತಿ ಮಾರ್ಚ್ - ಏಪ್ರಿಲ್‌ನಲ್ಲಿ ಸುಗ್ಗಿ ಮಾಡುತ್ತಾರೆ. ಈಗೀಗ ಮುಂಗಾರು ಹಿಂಗಾರುಗಳನ್ನು ಖಾರೀಫ್ ಮತ್ತು ರಾಬಿ ಎನ್ನುವ ಪದ್ಧತಿ ರೂಢಿಯಲ್ಲಿದೆ.[೯]

ಏಪ್ರಿಲ್ - ಮೇ ತಿಂಗಳ ಮಧ್ಯ ಭಾಗದಲ್ಲಿ ಇಲ್ಲಿ ಬರುವ ಬೆಳೆಯನ್ನು ಮಾವಿನ ಹನಿ ಎನ್ನುತ್ತಾರೆ. ಆಕಸ್ಮಿಕವಾಗಿ ಹೆಚ್ಚು ಬಿರುಗಾಳಿಯೊಂದಿಗೆ ಪೂರ್ವದಿಂದ ಬೀಸುವ ಗಾಳಿಯಿಂದ ಅಲ್ಲಿನ ವ್ಯವಸಾಯಕ್ಕೆ ಅನುಕೂಲಕರವಾದ ವಾತಾವರಣವಾಗುತ್ತದೆ.

ಕೊರಟಗೆರೆ ತಾಲ್ಲೂಕಿನಲ್ಲಿ ಸರಾಸರಿ ೨೨" - ೨೫" ಸೆಂಟಿಗ್ರೇಡ್ ಮಳೆಯಾಗುತ್ತದೆ. ಇತರೆ ತಾಲ್ಲೂಕುಗಳಿಗೆ ಹೋಲಿಸಿ ನೋಡಿದಾಗ ಮಳೆಯ ಪ್ರಮಾಣ ಕಡಿಮೆ ಇರುವುದರಿಂದ, ದಟ್ಟವಾದ ಅರಣ್ಯಗಳಿರದೇ ಪೊದೆಗಳು ಎತ್ತರವಲ್ಲದ ಮರಗಳನ್ನು ಕಾಣಬಹುದಾಗಿದೆ.ಪಕ್ಕದ ತಾಲ್ಲೂಕಿನ ಪಾವಗಡಕ್ಕೆ ಹೋಲಿಸಿದಾಗ ಮಳೆಯ ಪ್ರಮಾಣ ಹೆಚ್ಚಾಗಿದೆ. ಈ ಪರಿಸರದಲ್ಲಿ ಕಂಡು ಬರುವ ಬಹಳಷ್ಟು ಕಾಡುಗಳು ಬೆಟ್ಟದ ತಪ್ಪಲಿನಲ್ಲಿಯೇ ಕೇಂದ್ರಿಕೃತವಾಗಿವೆ. ಈ ಭಾಗದ ಅರಣ್ಯಗಳು ಮಾನವ ರಕ್ಷಿತ ಅರಣ್ಯಗಳಾಗಿ ಉಳಿದಿವೆ. ಇಲ್ಲಿ ಎಲೆ ಉದುರುವ ಮರಗಳು, ಮುಳ್ಳು ಗಿಡಗಳು ಕುರುಚಲು ಕಾಡು ಸಾಮಾನ್ಯವಾಗಿದೆ. ಇಲ್ಲಿನ ಸಸ್ಯವರ್ಗವು ಬಯಲು ಸೀಮೆಯ ಉಷ್ಣ ವಲಯಕ್ಕೆ ಸೇರಿವೆ. ಚನ್ನರಾಯನ ದುರ್ಗ ಹಾಗು ಸಿದ್ದರ ಬೆಟ್ಟದಲ್ಲಿ ಕಂಡು ಬರುವ ಕಾಡುಗಳೇ ಪ್ರಮುಖವಾದವುಗಳಾಗಿವೆ. ಪ್ರಸ್ತುತವಾಗಿ ತಾಲ್ಲೂಕಿನಲ್ಲಿ ಒಟ್ಟು ೦.೫೮ ಹೆಕ್ಟೇರ್‌ಗಳಷ್ಟು ಅರಣ್ಯ ಪ್ರದೇಶವಿದೆ.[೧೦] ಈ ಪರಿಸರದಲ್ಲಿ ಕಂಡು ಬರುವ ಸಸ್ಯವರ್ಗವನ್ನು ಸಾಮಾನ್ಯವಾಗಿ ನಾಲ್ಕು ಭಾಗಗಳಾಗಿ ಮಾಡಬಹುದು. ನೆಲಮಟ್ಟದಿಂದ ಸುಮಾರು ೪ ಅಡಿ ಎತ್ತರ ಬೆಳೆಯುವ ಪೊದರುಗಳು. ಇವು ಎತ್ತರವಾಗಿ ಬೆಳೆದು ಡಿಸೆಂಬರ್ ತಿಂಗಳ ವೇಳೆಗೆ ಎಲೆ ಊದುರಿ, ಯುಗಾದಿ ವೇಳೆಗೆ ಚಿಗುರುತ್ತವೆ. ಎರಡನೇ ವರ್ಗದ ಸಸ್ಯವರ್ಗವೆಂದರೆ ಹಾಲು ತುಂಬಿರುವ ಎಲೆಗಳಿಲ್ಲದ ಗಿಡಗಳು. ಮೂರನೇ ವರ್ಗದ ಸಸ್ಯವೆಂದರೆ ತಿನ್ನಲು ಉಪಯೋಗಿಸುವ ಫಲಗಳನ್ನು ಬಿಡುವ ಸಸ್ಯವರ್ಗಗಳು. ನಾಲ್ಕನೆಯದಾಗಿ ಕಾಡು ಹೂ ಗಿಡಗಳು ಮೊದಲನೆಯ ಸಸ್ಯವರ್ಗಕ್ಕೆ ನೆಲ ಬಂದರೆ, ಕಾರೆ, ತಂಗಡಿ ಗಿಡಗಳು ಬರುತ್ತವೆ. ಎರಡನೆ ವರ್ಗದ ಜಾತಿಗೆ ಸೇರಿದ ಸಸ್ಯವರ್ಗಗಳಲ್ಲಿ ಬೇವು, ಹಲಸು, ಜಾಲಿ, ಹೊಂಗೆ ,ಜಂಬೆ, ಹಿಪ್ಪೆ , ಹೊನ್ನೆ ,ಅಂಕೋಲೆ, ದೇವರಾಯ, ಜಿಗರೆ, ಬಿದಿರು, ತೇಗ , ಹೊನ್ನೆ, ಬೀಟೆ, ಶ್ರೀಗಂಧ, ಮೊದಲಾದವು ಕಂಡು ಬರುತ್ತವೆ. ಮೂರನೇ ವರ್ಗಕ್ಕೆ ಸೇರಿದ ಸಸ್ಯಗಳೆಂದರೆ ಬಂದಕಳ್ಳಿ ಪಾಪಾಸು ಕಳ್ಳಿ , ಜಡೇ ಕಳ್ಳಿ, ತೋಟದ ಕಳ್ಳಿ ಗಿಡ, ಎಕ್ಕದ ಗಿಡ, ಕಣುಗಲೆ ಇತ್ಯಾದಿ ಸಸ್ಯವರ್ಗ ಈ ವರ್ಗಕ್ಕೆ ಸೇರುತ್ತವೆ. ಇವುಗಳು ವರ್ಷದ ಎಲ್ಲಾ ಕಾಲದಲ್ಲಿ ಹಸಿರಿನಿಂದ ಕೂಡಿರುತ್ತವೆ. ನಾಲ್ಕನೇ ವರ್ಗಕ್ಕೆ ಸೇರಿದ ಸಸ್ಯವರ್ಗಗಳೆಂದರೆ ಸೀತಾಫಲ, ದೇವರಾರು ಹಣ್ಣು, ಅಂಟವಾಳದಕಾಯಿ, ಅರಳೇ ಕಾಯಿ, ಕಾರೆಕಾಯಿ, ಬಿಕ್ಕೆಕಾಯಿ, ಹಲಸು ಮೊದಲಾದವುಗಳಾಗಿವೆ. ಈ ಅಡವಿಯಲ್ಲಿ ಬಹಳ ಲಾಭ ತರುವ ಮರಗಳೆಂದರೆ ಹುಣಸೆ, ಬುರುಗ, ಅರಲೆ, ಅಂಟುವಾಳು, ಸೀತಾಫಲ, ಹೊಂಗೆ, ಜಾಲಿ, ಹೊನ್ನೆ, ಶ್ರೀಗಂಧ ಮುಂತಾದವುಗಳು ಇಂತಹ ಮರಗಳು ಬೆಟ್ಟದ ಸಾಲುಗಳಲ್ಲಿ ಅದರಲ್ಲೂ ಸಸ್ಯಕಾಶಿ ಎನಿಸಿಕೊಂಡಿರುವ ಸಿದ್ದರಬೆಟ್ಟದಲ್ಲಿ ಕಂಡು ಬರುತ್ತವೆ. ಇವುಗಳಲ್ಲದೆ ಗಿಡಮೂಲಿಕೆಯ ಧಾತುಗಳಿದ್ದು ಅವುಗಳಲ್ಲಿ

ಪ್ರಧಾನವಾದುವುಗಳೆಂದರೆ ನಿರ್ಗುಂಡಿ, ಚಕ್ರಾಣಿ, ಈಶ್ವರಿ, ಆಕಾಶ ಗರುಡ, ಆಡುಸೋಗೆ, ಚತ್ರಮೂಲ ಅಂಟವಾಳು, ಮರವಲೆ, ಸೋನಾಮುಖಿ, ಬೆಳ್ಳು ಹುಗ್ಗಣಿ, ಕಲ್ಲು ಹೊಂಬಾಳೆ, ಹುಣಸೆ ಬಂದಲಿಕೆ, ನೆಲಬೇವು, ಕಪಿಬಾಲ, ಜಡೆ ತಾಮ್ರ ,ಮುಳ್ಳು ಮುತಗ, ಕಾಡು ದ್ರಾಕ್ಷಿ, ಮಂಗರಬಳ್ಳಿ, ಮೂಟಂಕಾಲು, ಕಾಡು ಬಾಳೆ, ಮದುವಾಸಿನಿ, ಅಮೃತ್ ಕಿರುನಲ್ಲಿಗಳು ಗಿಡಮೂಲಿಕೆ ಸಸ್ಯಗಳಾಗಿವೆ.

ಈ ಪರಿಸರದಲ್ಲಿ ದಟ್ಟವಾದ ಅರಣ್ಯವಿಲ್ಲದ ಕಾರಣ ದ್ವಿತೀಯ ದರ್ಜೆಯ ಮಾಂಸಹಾರಿ ಪ್ರಾಣಿಗಳಾದ ನರಿ, ತೋಳ, ಕತ್ತೆ ಕಿರುಬ, ಅಪರೂಪದ ಪ್ರಾಣಿಯಾದ ಚಿರತೆ, ಕಾಣಿಸಿಕೊಳ್ಳುತ್ತವೆ. ಸಸ್ಯಹಾರಿ ಪ್ರಾಣಿಗಳಾದ ಕರಡಿ, ಕಾಡು ಹಂದಿ, ಮುಳ್ಳು ಹಂದಿ, ದೊಡ್ಡ ಜಿಂಕೆ, ಮುಂಗುಸಿ , ಉಡ, ಮೊಲ, ಹೇದಿ ಮುಂತಾದವುಗಳು ಕಂಡು ಬರುತ್ತವೆ. ವಿಷ ಜಂತುಗಳಾದ ನಾಗರ, ಗೋಧಿ ನಾಗರ, ಮಿಳ ನಾಗರ, ರಕ್ತ ಪಂಜರ, ಕೊಂಡಶಿಲ್ಲ, ಗೆರೆ ಹಾವು ಮುಂತಾದವುಗಳು ಕಂಡು ಬರುತ್ತವೆ.[೧೧]

ಜಿಲ್ಲೆಯ ಆರ್ಥಿಕ ರಂಗದ ಮೇಲೆ ಪ್ರಭಾವ ಬೀರುವ ಮತ್ತು ಲಾಭ ತರುವ ಮುಖ್ಯ ಖನಿಜಗಳು ಈ ಪರಿಸರದಲ್ಲಿ ಹೇರಳವಾಗಿಲ್ಲದಿದ್ದರೂ ಕೆಲವೊಮ್ಮೆ ಕೆಂಪು ಹರಳುಯುಕ್ತ ಕಚ್ಚಾ ವಸ್ತುಗಳು, ಮ್ಯಾಂಗನೀಸ್, ಸೀಸ ದೊರೆತು ಅಂತರರಾಷ್ಟ್ರೀಯ ಪ್ರಾಶಸ್ತ್ಯಯನ್ನು ಪಡೆದಿದೆ. ಇಲ್ಲಿ ದೊರೆತ ಬರ್ಮಾ ರೂಬಿಯನ್ನು ಹೋಲುವ ರೂಬಿ ಸ್ಟೋನ್‌ಗಳು, ಗುಲಗಂಜಿ ಗಾತ್ರದಿಂದ ನಿಂಬೆಹಣ್ಣಿನ ಗಾತ್ರದವರೆಗೆ ಸಿಗುತ್ತವೆ.[೧೨] ಈ ಅರಳುಗಳು ಹೆಚ್ಚಾಗಿ ದೊಡ್ಡ ಸಾಗ್ಗೆರೆ, ತುಂಬಾಡಿ, ಗೊಲ್ಲಹಳ್ಳಿ, ನೇಗಲಾಲ, ಸಿದ್ದರಬೆಟ್ಟದ ತಪ್ಪಲು, ಜೋನಿಗರಹಳ್ಳಿ, ಕುರಂಕೋಟೆ, ಮಣುವಿನ ಕುರಿಕೆ ಭಾಗದಲ್ಲಿ ಹೆಚ್ಚು ದೊರೆಯುತ್ತವೆ. ಕಟ್ಟಡ ನಿರ್ಮಾಣಕ್ಕೆ ಬೇಕಾದ ಅಗ್ನಿ ಶಿಲೆಯ ಗ್ರಾನೈಟ್ ಕ್ಲೋಸ್ ಪೇಟೆ, ಗ್ರಾನೈಟ್‌ಗಳನ್ನು ಮನೆ ಕಟ್ಟಲು ಬಳಸುತ್ತಾರೆ. ಈ ಭಾಗದಲ್ಲಿ ಸುಣ್ಣದ ಕಲ್ಲು ಹೆಚ್ಚು ದೊರೆಯುತ್ತಿದ್ದು ತುಂಬಾಡಿ, ಚೋಳರಪಾಳ್ಯ ಗೊಲ್ಲಹಳ್ಳಿ, ಮುಗೊಂಡನಹಳ್ಳಿಗಳಲ್ಲಿ ಈ ಕಲ್ಲನ್ನು ಸುಟ್ಟು ಮಾರಾಟ ಮಾಡುತ್ತಾರೆ. ಸಾಮಾನ್ಯವಾಗಿ ಹೆಚ್ಚು ಮನೆಗೋಡೆಗೆ ಗಾರೆ, ಚುರ್ಕಿ, ಹಾಕಲು ಬಳಸುತ್ತಾರೆ. ಅಬ್ರಕವು ತಾಲ್ಲೂಕಿನಲ್ಲಿ ಕಡಿಮೆ ಪ್ರಮಾಣದಲ್ಲಿ ದೊರೆಯುತ್ತದೆ.

ಇಲ್ಲಿನ ಪರಿಸರವು ಅಲ್ಲಲ್ಲಿ ಬೆಟ್ಟಗುಡ್ಡಗಳಿಂದ ಆವೃತ್ತವಾಗಿದ್ದು, ಇಲ್ಲಿನ ಪ್ರಮುಖ ಜಲಸಂಪನ್ಮೂಲವು ಕೆರೆಗಳು, ಬಾವಿಗಳು , ಕೊಳವೆ ಬಾವಿ, ತಲಫಿರಿಗೆಗಳನ್ನು ಅವಲಂಭಿಸಿದೆ. ಈ ಪರಿಸರದಲ್ಲಿ ಪ್ರಾಚೀನ ಕಾಲದಿಂದಲೂ ನೀರಿನ ಆಸರೆಯಾಗಿ ಕೆರೆಗಳು ಪ್ರಮುಖ ಪಾತ್ರ ವಹಿಸುತ್ತವೆ.

ಈ ಪ್ರದೇಶದಲ್ಲಿ ಐತಿಹಾಸಿಕ ಕೆರೆಗಳಿದ್ದು, ಅವುಗಳಲ್ಲಿ ಮುಖ್ಯವಾಗಿ ಮರೆನಾಯಕನಹಳ್ಳಿಯ ಕನೇರಮ್ಮನ ಕೆರೆ, ತುಂಬಾಡಿಯ ಹಳೆಕೆರೆ, ಕೊರಟಗೆರೆಯ ಹಳೆಕೆರೆ, ಚನ್ನರಾಯನದುರ್ಗದ ಕೆರೆ, ಸಿದ್ದರಬೆಟ್ಟದ ಅಲಸಂದೆ ಕೆರೆ ಇವುಗಳು ಪ್ರಾಚೀನ ಕಾಲದಿಂದಲೂ ನೀರಿನ ಆಸರೆಯಾಗಿ ಉಳಿದಿವೆ. ತಾಲ್ಲೂಕಿನಲ್ಲಿ ಸುಮಾರು ೯೮ ಕೆರೆಗಳು ಇದ್ದು ಇತರೆ ಸಣ್ಣ ಪುಟ್ಟ ಬಾವಿಗಳನ್ನು ಒಳಗೊಂಡಿವೆ.[೧೩]

ಈ ತಾಲ್ಲೂಕಿನ ದಕ್ಷಿಣ ಭಾಗದಲ್ಲಿ ಜಯ ಮತ್ತು ಮಂಗಲಿ ಎಂಬ ನದಿಗಳು ದೇವರಾಯನದುರ್ಗದಲ್ಲಿ ಉಗಮವಾಗಿ ಹರಿದು, ಇರಕಸಂದ್ರದ ಮೂಲಕ ಮುಂದೆ ಸಾಗುತ್ತವೆ. ನಂತರ ತಾಲ್ಲೂಕಿನ ಹೊಳವನಹಳ್ಳಿಯ ಪೂರ್ವ ಭಾಗದಿಂದ ಹರಿದು ಬರುವ ಗರುಡಾಚಲ ಉಪನದಿಯನ್ನು ಕೂಡುತ್ತವೆ. ಅಲ್ಲಿಂದ ಮುಂದೆ ಹರಿದು ರಾಂಪುರದ ಬಳಿ ಪರಗಿಕೆರೆಗೆ ಸೇರುತ್ತವೆ. ಗರುಡಾಚಲ ನದಿಯು ದೇವರಾಯನದುರ್ಗದ ಆಗ್ನೇಯ ಮೂಲೆಯಲ್ಲಿ ಹುಟ್ಟಿ ಉತ್ತರಾಭಿಮುಖವಾಗಿ ಹರಿದು, ತಾಲ್ಲೂಕಿನ ಹೊಳವನಹಳ್ಳಿ ಬಳಿ ಜಯಮಂಗಲಿ ನದಿ ಸೇರುತ್ತದೆ. ಈ ನದಿಗೆ ಅಡ್ಡಲಾಗಿ ತೀತಾ ಜಲಾಶಯವನ್ನು ನಿರ್ಮಿಸಲಾಗಿದೆ.

ಈ ಪರಿಸರದ ಮತ್ತೊಂದು ನದಿಯಾದ ಸುವರ್ಣಮುಖಿಯು ಚನ್ನರಾಯನದುರ್ಗದ ಪರ್ವತ ಶ್ರೇಣಿಯ ಸಿದ್ದರ ಬೆಟ್ಟದಲ್ಲಿ ಹುಟ್ಟಿ, ಕೊರಟಗೆರೆ ತಾಲ್ಲೂಕಿನಲ್ಲಿ ೨೪.೧೫ ಕಿ.ಮೀ. ದೂರ ಕ್ರಮಿಸಿ . ರಾಂಪುರದ ಬಳಿ ಜಯಮಂಗಲಿ ನದಿಯನ್ನು ಸೇರುತ್ತದೆ. ಈ ನದಿಗೆ ಅಡ್ಡಲಾಗಿ ೧೮೮೮ ರಿಂದ ೧೮೯೨ ರ ವರೆಗೆ ಕ್ಷಾಮ ಪರಿಹಾರ ಕಾಮಗಾರಿ ಯೋಜನೆ ಅನ್ವಯ ಬೋರನಕಣಿವೆ ಜಲಾಶಯವನ್ನು ನಿರ್ಮಿಸಲಾಗಿದೆ. ಇದು ೫೬೭ ಹೆಕ್ಟೇರ್‌ಗೆ ನೀರು ಸರಬರಾಜು ಮಾಡುತ್ತದೆ.[೧೪] ನದಿಗಳು ಮಳೆಗಾಲದಲ್ಲಿ ಮಾತ್ರ ತುಂಬಿ ಹರಿದು ಬೇಸಿಗೆಯಲ್ಲಿ ಬತ್ತಿ ಹೋಗುತ್ತವೆ. ಆದ್ದರಿಂದ ಇಲ್ಲಿನ ರೈತರು ವ್ಯವಸಾಯಕ್ಕೆ ಕೊಳವೆ ಬಾವಿಗಳಿಂದ ನೀರುಣಿಸಿ ಬೆಳೆಗಳನ್ನು ಉಳಿಸಿಕೊಳ್ಳುತ್ತಾರೆ.

ಇತ್ತೀಚಿನ ದಿನಗಳಲ್ಲಿ ಸರ್ಕಾರವು ಕೆರೆಗಳ ದುರಸ್ತಿ ಕಾರ್ಯವನ್ನು ಕೈಗೊಳ್ಳುವುದರ ಮೂಲಕ ಅವುಗಳನ್ನು ಉಳಿಸುವ ಪ್ರಯತ್ನಕ್ಕೆ ಕೈ ಹಾಕಿದೆ. ಜೊತೆಗೆ ಹಲವು ಸಂಘ ಸಂಸ್ಥೆಗಳು ಇದರ ಜೊತೆಗೆ ಕೈ ಜೋಡಿಸಿ ಅವುಗಳನ್ನು ಅಭಿವೃದ್ಧಿ ಪಡಿಸಲು ಶ್ರಮಿಸುತ್ತಿವೆ. ಅಲ್ಲಲ್ಲಿ ನೈಸರ್ಗಿಕವಾಗಿ ನೀರು ಮೇಲೆ ಬರುವ ತಲಫಿರಿಗೆ, ಬಾವಿಗಳು ಸಹ ಜನರಿಗೆ ನೀರೊದಗಿಸುವ ತಾಣಗಳಾಗಿದ್ದು, ಅಂತರ್ ಜಲ ಕುಸಿತದಿಂದ ಇವು ಬೇಸಿಗೆಯಲ್ಲಿ ಒಣಗಿ ಮಳೆಗಾಲದಲ್ಲಿ ನೀರು ತುಂಬಿಕೊಳ್ಳುತ್ತವೆ ತಲಫಿರಿಗೆಯು ರಾಂಪುರದಂತ ಪ್ರದೇಶದಲ್ಲಿ ಇಂದಿಗೂ ಕಾಣಬಹುದಾಗಿದೆ.[೧೫]

ಈ ಭಾಗದ ಜನರ ಪ್ರಮುಖ ಕಸುಬು ವ್ಯವಸಾಯವಾಗಿದ್ದು, ಹೆಚ್ಚು ಮಳೆಯಾಧಾರಿತ ಬೇಸಾಯ ಮಾಡುತ್ತಾರೆ. ಕೆರೆಗಳು ತುಂಬಿದಾಗ ಬಾವಿಗಳಿಂದ ಹಾಗು ಕೊಳವೆ ಬಾವಿಗಳ ಸಹಾಯದಿಂದ ನೀರಾವರಿ ಬೇಸಾಯ ಮಾಡುತ್ತಾರೆ. ಹೆಚ್ಚು ಮಳೆಯನ್ನಾಧರಿಸಿ ಒಣ ಬೇಸಾಯ ಮಾಡುತ್ತಾರೆ. ಕೃಷಿ ಗಣತಿಯ ಪ್ರಕಾರ ಈ ಕ್ಷೇತ್ರದಲ್ಲಿ ೧೫.೨೭ ಹೆಕ್ಟೇರ್‌ಗಳಲ್ಲಿ (ಖುಷ್ಕಿ) ದಿನ್ನೆ ಬೆಳೆ ಬೆಳೆಯುತ್ತಾರೆ. ಇಲ್ಲಿನ ಪ್ರಮುಖ ಬೆಳೆಗಳೆಂದರೆ ರಾಗಿ, ಭತ್ತ, ದ್ವಿದಳ ದಾನ್ಯವಾದ ನೆಲಗಡಲೆ, ತರಕಾರಿ, ರೂಪದ ಬೆಳೆಗಳು ವಾಣಿಜ್ಯ ಬೆಳೆಗಳಾದ ಹಿಪ್ಪು ನೇರಳೆ, ಅಡಿಕೆ, ತೆಂಗು , ದಾಳಿಂಬೆ, ಪಪ್ಪಾಯಿ, ಮೂಸಂಬಿ ಮುಂತಾದ ಬೆಳೆಗಳನ್ನು ಹನಿ ನೀರಾವರಿಯ ಸಹಾಯದಿಂದ ಬೆಳೆಯುತ್ತಾರೆ.[೧೬]

## ೨.೨ ಪ್ರಾಗಿತಿಹಾಸ

ಒಂದು ಪ್ರದೇಶದ ಇತಿಹಾಸವನ್ನು ರಚಿಸಲು ಮತ್ತು ಅದರ ಐತಿಹಾಸಿಕ ಮಹತ್ವವನ್ನು ತಿಳಿಯಬೇಕಾದರೆ ಅಲ್ಲಿ ದೊರೆಯುವ ಪ್ರಾಚೀನ ಅವಶೇಷಗಳಿಂದ ಸಾಧ್ಯವಾಗುತ್ತದೆ. ಇತಿಹಾಸವನ್ನು ಸಾಮಾನ್ಯವಾಗಿ ಪ್ರಾಗಿತಿಹಾಸ ಕಾಲ ಮತ್ತು ಇತಿಹಾಸ ಕಾಲ ಎಂಬುದಾಗಿ ವಿಭಾಗಿಸಲಾಗಿದೆ. ಪ್ರಾಗಿತಿಹಾಸ ಕಾಲವು ಲಿಪಿ ಇಲ್ಲದ ಕಾಲವಾಗಿದ್ದು, ಇತಿಹಾಸ ಕಾಲವು ಲಿಪಿಯನ್ನು ಹೊಂದಿದ ಕಾಲವೆನ್ನುಬಹುದು. ಪ್ರಾಗಿತಿಹಾಸ ಕಾಲದ ಮಾನವ ಜೀವನ ಆರಂಭದ ಕಾಲ ಕುತೂಹಲಕಾರಿಯಾಗಿದೆ. ಆ ಕಾಲದ ಮಾನವನಿಗೆ ಓದು ಬರಹದ ಜ್ಞಾನವಿರಲಿಲ್ಲ. ತನಗೆ ಇಷ್ಟ ಬಂದ ಹಾಗೆ ಜೀವನ ಸಾಗಿಸುತ್ತಿದ್ದನು. ಆಹಾರಕ್ಕಾಗಿ ಬೇಟೆಯಾಡಿ ತನ್ನ ಜೀವನ ನಡೆಸುತ್ತಿದ್ದನು. ಆತ ಬೇಟೆಯಾಡಲು ಕಲ್ಲಿನ ಆಯುಧಗಳನ್ನು ಬಳಸುತ್ತಿದ್ದನು. ಇಂತಹ ಉಪಕರಣಗಳನ್ನು ತಯಾರಿಸಿಕೊಳ್ಳಲು ಕಲ್ಲಿನ ಮಾದರಿಯ ಆಯ್ಕೆ ಅವುಗಳಲ್ಲಿ ಬಳಸಿದ ತಾಂತ್ರಿಕತೆಯು ಮುಖ್ಯ ಪಾತ್ರವನ್ನು ವಹಿಸುತ್ತದೆ. ಮಾನವನ ಜೀವನ ಕ್ರಮದಲ್ಲಿನ ವಿಕಾಸವನ್ನು ಅವರು ಬಳಸಿದ ಆಯುಧೋಪಕರಣಗಳಿಂದ ತಿಳಿಯಲು ಸಹಾಯಕವಾಗಿದೆ. ಇಂತಹ ವಿಕಾಸದ ಜೀವನಕ್ರಮವನ್ನು ಸಂಸ್ಕೃತಿ ಎಂದು ಕರೆಯಲಾಗಿದೆ. ಕಲ್ಲಿನ ಬಳಕೆಯಿಂದಾಗಿ ಈ ಹಂತವನ್ನು 'ಶಿಲಾಯುಗ ಸಂಸ್ಕೃತಿ' ಎಂದು ಕರೆದಿರುವರು.[೧೭] ಜೀವನ ಕ್ರಮದಲ್ಲಿ ಬೆಳವಣಿಗೆ ಸಾಧಿಸಿಕೊಂಡು ಬಂದ ಮಾನವ ಶಿಲೆಗಳಿಂದ ಲೋಹದ ಆಯುಧಗಳಿಗೆ ಬದಲಾವಣೆ ಹೊಂದಿ ಸುಸಂಸ್ಕೃತ ಶೈಲಿಯನ್ನು ರೂಪಿಸಿಕೊಂಡು ನಾಗರೀಕನಾದನು.[೧೮]

ಕರ್ನಾಟಕದ ಪ್ರಾಚೀನ ಸಂಸ್ಕೃತಿಯ ನೆಲೆಗಳನ್ನು ಕುರಿತು ದೇಶೀಯ ಹಾಗು ವಿದೇಶಿ ಸಂಶೋಧಕರು ಶೋಧನೆ ಕೈಗೊಂಡು ಹೊಸ ನೆಲೆಗಳನ್ನು ಬೆಳಕಿಗೆ ತಂದಿದ್ದಾರೆ. ಕ್ರಿ.ಶ. ೧೮೪೭ ರಲ್ಲಿ ಪ್ರಿಮ್ ರೋಸ್ ಪ್ರಾಗಿತಿಹಾಸದ ಅಧ್ಯಯನ ಕುರಿತಂತೆ ರಾಯಚೂರು ಜಿಲ್ಲೆಯ ಲಿಂಗಸೂಗೂರು ಪ್ರದೇಶದಲ್ಲಿ ಆಕಸ್ಮಿಕವಾಗಿ ಸಂಶೋಧಿಸಿದ ಶಿಲೋಪಕರಣಗಳಿಂದ ಆರಂಭವಾಗಿ ಮುಂದೆ ರಾಬರ್ಟ್ ಬ್ರೂಸ್ ಪೂಟ್, ಕರ್ನಲ್ ಮೆಕೋಜಿಯವರು ಪ್ರಾಗಿತಿಹಾಸಿಕ ನೆಲೆಗಳ ಸಂಶೋಧನೆಯಲ್ಲಿ ಗಣನೀಯ ಸಾಧನೆ ಮಾಡಿದರು.[೧೯] ಈ ವೇಳೆಗೆ ಕರ್ನಾಟಕದಲ್ಲಿ ಸುಮಾರು ೧೫೧೭ ನೆಲೆಗಳನ್ನು ಗುರ್ತಿಸಿದ್ದು ಇಂದಿಗೂ ಸಹ ಹೊಸ ನೆಲೆಗಳು ಕಂಡು ಬರುತ್ತಿವೆ. ಕರ್ನಾಟಕದ ಶಿಲಾ ಸಂಸ್ಕೃತಿಯ ಹೆಚ್ಚು ನೆಲೆಗಳು ತುಮಕೂರು ಜಿಲ್ಲೆಯಲ್ಲಿದ್ದು ಸುಮಾರು ೨೬೬ ನೆಲೆಗಳು ಕಂಡು ಬಂದಿವೆ.[೨೦] ಈ ಜಿಲ್ಲೆಯು ಪ್ರಾಗಿತಿಹಾಸಿಕವಾಗಿ ಸಮೃದ್ದಿಯಾದ ಕ್ಷೇತ್ರವಾಗಿತ್ತೆಂದು ತಿಳಿದು ಬರುತ್ತದೆ. ಜಿಲ್ಲೆಯ ಹತ್ತು ತಾಲ್ಲೂಕುಗಳಲ್ಲಿಯೂ ಪ್ರಾಗಿತಿಹಾಸಿಕ ನೆಲೆಗಳನ್ನು ಕಾಣಬಹುದು. ಹಳೇ ಶಿಲಾಯುಗದಿಂದ ಪಾರಂಭವಾಗಿ ಇತಿಹಾಸದ ಆರಂಭದ ಕಾಲದವರೆಗೆ ವಿವಿಧ ಸಂಸ್ಕೃತಿಯ ಹಂತಗಳು ದೊರೆತಿವೆ.[೨೧]

ಆದಿ ಹಳೆ ಶಿಲಾಯುಗ ಸಂಸ್ಕೃತಿಯ ಸುಮಾರು ೧೮ ನೆಲೆಗಳು ಕಂಡು ಬಂದಿದ್ದು, ಅವುಗಳಲ್ಲಿ ಮುಖ್ಯವಾಗಿ ಕಿಬ್ಬನಹಳ್ಳಿ, ಬಿಳಿಗೆರೆ, ಅಪ್ಪಾನಹಳ್ಳಿ, ಬ್ಯಾಸಂದ್ರ ಬೆಟ್ಟ,ಇನ್ನೂ ಮುಂತಾದ ಕಡೆಗಳಲ್ಲಿ ಕಂಡು ಬಂದಿದೆ. ಈ ಸಂಸ್ಕೃತಿಯ ಕಾಲ ಘಟ್ಟವನ್ನು ಸುಮಾರು ೪ ಲಕ್ಷದಿಂದ ಒಂದು ಲಕ್ಷ ವರ್ಷಗಳ ಹಿಂದೆ ಇತ್ತೆಂದು ಸಂಶೋಧಕರು ತಿಳಿಸಿದ್ದಾರೆ.[೨೨] ಹಾಗೆ ಮಧ್ಯ ಶಿಲಾಯುಗಕ್ಕೆ ಸಂಬಂಧಿಸಿದ ೨೨ ನೆಲೆಗಳು ನೂತನ ಶಿಲಾಯುಗಕ್ಕೆ ಸಂಬಂಧಿಸಿದಂತೆ ೩೨ ಶಿಲಾ ತಾಮ್ರಯುಗಕ್ಕೆ ೨ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದಂತೆ ೩೪ ನೆಲೆಗಳು ಕಂಡು ಬಂದಿದ್ದು, ಇತಿಹಾಸ ಆರಂಭಕಾಲದ ೧೯ ನೆಲೆಗಳು ಕಂಡು ಬಂದಿವೆ. ಎಂದು ಸಂಶೋಧಕರು 'ಗುರುತಿಸಿದ್ದಾರೆ.[೨೩] ಈ ನೆಲೆಯಲ್ಲಿ ವಿವಿಧ ಬಗೆಯ ಆಯುಧೋಪಕರಣಗಳು ದೊರೆತಿದ್ದು ಅವುಗಳನ್ನು ತಯಾರಿಸಲು ಕ್ವಾರ್ಟ್ಜ್ ಶಿಲೆಯನ್ನು ಬಳಸಲಾಗಿದೆ.

ಕೊರಟಗೆರೆ ತಾಲ್ಲೂಕಿನಲ್ಲಿ ದೊರೆಯುವ ಶಿಲಾಯುಗ ಸಂಸ್ಕೃತಿಯ ಹಂತಗಳಾದ ಸೂಕ್ಷ್ಮಯುಗ, ನೂತನ ಹಾಗು ಬೃಹತ್ ಶಿಲಾಯುಗ ಕಾಲಕ್ಕೆ ಸೇರಿದ ಅವಶೇಷಗಳನ್ನು ಗುರ್ತಿಸಿದ್ದು, ಅಂತಹ ಸ್ಥಳಗಳೆಂದರೆ ಸಿದ್ದರಬೆಟ್ಟ, ಬಿರದೇನಹಳ್ಳಿ, ಜೋನಿಗರಹಳ್ಳಿ, ಬುಕ್ಕಾಪಟ್ಟಣ, ದೊಡ್ಡ ಪಾಲನಹಳ್ಳಿ, ಸೀಗೆಪಾಳ್ಯ ಇರಕಸಂದ್ರ ಕಾಲೋನಿ, ತಣ್ಣೇನಹಳ್ಳಿ, ಹೊಸಕೋಟೆ, ಹೊನ್ನೇನಹಳ್ಳಿ, ಮುಂತಾದ ಕಡೆಗಳಲ್ಲಿ ಕಂಡು ಬಂದಿವೆ.[೨೪] ತಾಲ್ಲೂಕಿನಲ್ಲಿ ಒಟ್ಟು ಹಳೇ ಅಂತ್ಯ ಶಿಲಾಯುಗದ ಎರಡು ನೆಲೆಗಳು, ಸೂಕ್ಷ್ಮ ಶಿಲಾಯುಗದ ಮೂರು ನೆಲೆಗಳು, ನವ ಶಿಲಾಯುಗದ ಐದು ನೆಲಗಳು ಹಾಗು ಬೃಹತ್ ಶಿಲಾಯುಗದ ಏಳು ನೆಲೆಗಳನ್ನು ಕಾಣಬಹುದು. ಸಿದ್ದರ ಬೆಟ್ಟದ ತಪ್ಪಲಿನಲ್ಲಿ ಅನೇಕ ಗುಹೆಗಳು ಕಂಡು ಬಂದಿದ್ದು, ಅವರ ವಾಸಸ್ಥಾನವಾಗಿರುವುದಕ್ಕೆ ಅಲ್ಲಿ ದೊರೆತಿರುವ ಮಡಿಕೆ ಮತ್ತು ಆಯುಧಗಳು ಸಾಕ್ಷಿಯಾಗಿವೆ.

ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಗೆ ಸೇರಿದ ಆಯುಧೋಪಕರಣಗಳನ್ನು ಈ ಪ್ರದೇಶದಲ್ಲೇ ದೊರೆಯುವ ಸ್ಪಟಿಕ ಶಿಲೆಯನ್ನು ಬಳಸಿ ತಯಾರಿಸಿರುವುದು ಕಂಡು ಬರುತ್ತದೆ. ಇಲ್ಲಿ ದೊರೆತಿರುವ ಪ್ರಮುಖ ಶಿಲಾಯುಧಗಳೆಂದರೆ ಸೂಜಿಗಲ್ಲು, ಕೊರೆಯುವ ಆಯುಧ, ಅಗಲವಾದ ತೆಳು ಚಕ್ಕೆಯಂತಹ ಅಲಗು ಉಪಕರಣಗಳು ದೊರೆತಿವೆ.[೨೫] ಇಂತಹ ಕಿರು ಪ್ರಮಾಣದ ಆಯುಧಗಳನ್ನು ಬಳಸಿಕೊಂಡು ಸಣ್ಣ ಪ್ರಮಾಣದ ಪ್ರಾಣಿಗಳನ್ನು ಬೇಟೆಯಾಡಿ ತನ್ನ ಜೀವನ ಕ್ರಮವನ್ನು ಅಂದಿನ ಮಾನವ ಸಾಗಿಸುತ್ತಿದ್ದನೆಂದು ಹೇಳಬಹುದಾಗಿದೆ. ಅದೇ ರೀತಿಯಲ್ಲಿ ಸ್ವಲ್ಪ ಪ್ರಮಾಣದ ಕೃಷಿಯನ್ನು ಕಲಿತು ಒಂದು ಕಡೆ ನೆಲೆಯೂರುವ ಪ್ರಯತ್ನವನ್ನು ಮಾಡಿರುವುದನ್ನು ಕಾಣಬಹುದು. ಈ ಸಂಸ್ಕೃತಿಯ ಕಾಲಮಾನವನ್ನು ಗುರುತಿಸುವುದಾದರೆ ಸುಮಾರು ಕ್ರಿ.ಪೂ. ೬೦೦೦-೫೦೦೦ ಕ್ಕೆ ಸೀಮಿತಗೊಳಿಸಬಹುದು.[೨೬]

ಭಾರತದಲ್ಲಿ ಉತ್ತರ ಪ್ರದೇಶದ ಪೂರ್ವಭಾಗದ ತೋನ್ಸೆ ನದಿಯ ದಂಡೆಯಲ್ಲಿ ಲಿಮೆಸೂರಿಯರ್ ಎಂಬುವರು ನವಶಿಲಾಯುಗದ ಅವಶೇಷವನ್ನು ಕ್ರಿ.ಶ.೧೮೬೦ ರಲ್ಲಿ ಪ್ರಥಮ ಬಾರಿಗೆ ಗುರುತಿಸಿದರು. ಹಾಗೆ ಕರ್ನಾಟಕದಲ್ಲಿ ಕ್ರಿ.ಶ. ೧೮೭೨ ರಲ್ಲಿ ಫ್ರೆಸರ್‌ರವರು ಬಳ್ಳಾರಿಯ ಕುಪ್ಪಗಲ್ಲು ಬೆಟ್ಟದಲ್ಲಿ ನೂತನ

ಶಿಲಾಯುಗದ ಉಪಕರಣಗಳ ಉತ್ಪಾದನಾ ಕೇಂದ್ರವನ್ನು ಮೊದಲಿಗೆ ಗುರುತಿಸಿದ್ದಾರೆ.[೨೭] ನೂತನ ಶಿಲಾಯುಗ ಸಂಸ್ಕೃತಿಯ ಹಂತವು ಮುಖ್ಯವಾಗಿದ್ದು ಮಾನವನ ಹೊಸ ರೀತಿಯ ಜೀವನ ವಿಧಾನಗಳನ್ನು ರೂಢಿಸಿಕೊಳ್ಳುವಲ್ಲಿ ಮುಂದಾದನು. ಪ್ರಾಣಿಗಳನ್ನು ಪಳಗಿಸಿ ಅವುಗಳ ಸಹಾಯದಿಂದ ಕೃಷಿ ಮಾಡುವುದನ್ನು ಕಲಿತು ಒಂದು ಕಡೆ ನೆಲೆನಿಲ್ಲಲು ಕಲಿತನು. ಈ ಕಾಲದ ಮಾನವನು ಮಣ್ಣಿನ ಮಡಿಕೆ ಮಾಡುವುದನ್ನು ಕಲಿತನು.[೨೮] ಜೊತೆಗೆ ಉತ್ತಮ ಮಾದರಿಯ ಶಿಲೋಪಕರಣಗಳನ್ನು ತಯಾರಿಸಿ ತನ್ನ ಜೀವನವನ್ನು ನಡೆಸುತ್ತಿದ್ದನು. ಕೊರಟಗೆರೆ ತಾಲ್ಲೂಕಿನಲ್ಲಿ ಕಂಡು ಬರುವ ಪ್ರಮುಖ ನೂತನ ಶಿಲಾಯುಗದ ನೆಲೆಗಳೆಂದರೆ ಸಿದ್ದರಬೆಟ್ಟ, ಬುಕ್ಕಾಪಟ್ಟಣ, ಬಂಡೆಹಳ್ಳಿ, ಜೋನಿಗರ ಹಳ್ಳಿಗಳು ಪ್ರಮುಖವಾಗಿವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನೂತನ ಶಿಲಾಯುಗದ ಸಂಸ್ಕೃತಿಯ ಆಯುಧಗಳು ಬುಕ್ಕಾಪಟ್ಟಣದಲ್ಲಿ ದೊರೆತಿವೆ. ಇವು ಕ್ರಿ.ಪೂ. ೩೦೦೦ ವರ್ಷಗಳ ಹಿಂದಿನ ಮಾನವ ಬಳಸಿರಬಹುದೆಂದು ತಿಳಿಯಲಾಗಿದೆ.

ಅದೇ ರೀತಿ ಶ್ರೀವತ್ಸ ಎಸ್.ವಟಿಯವರು ೧೯೭೮ ರಲ್ಲಿ ಈ ಪ್ರದೇಶದಲ್ಲಿ ಸಿಕ್ಕ ಶಿಲಾ ಕೊಡಲಿಗಳನ್ನು ವರದಿ ಮಾಡಿದ್ದಾರೆ. ನಂತರದಲ್ಲಿ ಸಮಗ್ರವಾಗಿ ಅಧ್ಯಯನ ಕೈಗೊಂಡ ಡಾ. ಕೆ.ಬಿ. ಶಿವತಾರಕ್‌ರವರು ತಾಲ್ಲೂಕಿನ ಹಲವು ನೂತನ ಶಿಲಾಯುಗದ ನೆಲೆಗಳನ್ನು ಕಂಡು ಹಿಡಿದರು. ನನ್ನ ಕಾರ್ಯಕ್ಷೇತ್ರದಲ್ಲಿ ಬುಕ್ಕಾಪಟ್ಟಣ ಹಾಗು ಸಿದ್ದರ ಬೆಟ್ಟದ ತಪ್ಪಲಿನಲ್ಲಿ ನೂತನ ಶಿಲಾಯುಗದ ಮಡಿಕೆ ಚೂರುಗಳನ್ನು ಸಂಗ್ರಹಿಸಲಾಗಿದ್ದು ಈ ನೆಲೆಯಲ್ಲಿ ನೂತನ ಶಿಲಾಯುಗದ ಮಾನವನು ನೆಲೆಸಿದ ಕುರುಹುಗಳು ಕಂಡು ಬಂದಿವೆ.

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಬುಕ್ಕಾಪಟ್ಟಣ ಗ್ರಾಮದಲ್ಲಿ ಉಜ್ಜಿ ನಯಗೊಳಿಸಿದ ಶಿಲಾ ಕೊಡಲಿ ದೊರೆತ್ತಿದ್ದು, ಇದು ೮ ಸೆಂ.ಮೀ. ಉದ್ದ ೩ ಸೆಂ.ಮೀ ಅಗಲ ಹೊಂದಿದ್ದು ಮೇಲ್ಭಾಗದಲ್ಲಿ ಚೂಪಾಗಿದೆ. ಕೆಳಭಾಗದಲ್ಲಿ ಅಗಲವಾಗಿದೆ. ಇದನ್ನು ಪ್ರಾಣಿಗಳ ಚರ್ಮ ತೆಗೆಯಲು ಮತ್ತು ಬೇಟೆಯಾಡಲು ಬಳಸಿರಬಹುದು. ಅದೇ ರೀತಿ ಚನ್ನರಾಯನದುರ್ಗ ಮತ್ತು ಸಿದ್ದರಬೆಟ್ಟದಲ್ಲಿ ಕೆಂಪು ಬಣ್ಣದ ಮಡಿಕೆಯ ಚೂರುಗಳು ಕಂಡು ಬಂದಿವೆ. ಆರಂಭದಲ್ಲಿ ಕೈಯಲ್ಲಿ ಮಾಡಲಾಗಿದ್ದು, ನಂತರದಲ್ಲಿ ಚಕ್ರವನ್ನು ಬಳಸಿ ತಯಾರಿಸಲಾಗಿದೆ.

ಬೃಹತ್ ಶಿಲಾ ಸಂಸ್ಕೃತಿಯ ಕಾಲವು ಮಾನವನ ಬದುಕಿನಲ್ಲಿ ಪ್ರಮುಖ ಘಟ್ಟವೆಂದರೆ ತಪ್ಪಾಗಲಾರದು. ಈ ಜನರ ಸಂಸ್ಕೃತಿಯ ಕುರುಹುಗಳು ಭಾರತದ ದಕ್ಷಿಣ ಭಾಗದ ತುಂಬೆಲ್ಲಾ ಹರಡಿಕೊಂಡಿವೆ. ಈ ಸಂಸ್ಕೃತಿಗೆ ಸಂಬಂಧಿಸಿದ ಕುರುಹುಗಳು ಹೆಚ್ಚಾಗಿ ತುಮಕೂರು ಜಿಲ್ಲೆಯ ಹಲವು ಪ್ರದೇಶದಲ್ಲಿ ಕಾಣಬಹುದು. ಕೊರಟಗೆರೆ ಪ್ರದೇಶದಲ್ಲಿ ಈ ಸಂಸ್ಕೃತಿಗೆ ಸೇರಿದ ಶಿಲಾ ಗೋರಿಗಳು ಮತ್ತು ಸಮಾಧಿಯ ನೆಲೆಗಳನ್ನು ಗುರ್ತಿಸಬಹುದು. ಬೃಹತ್ ಶಿಲಾಯುಗದ ನೆಲೆಗಳಲ್ಲಿ ನೂತನ ಶಿಲಾಯುಗದ ನೆಲೆಗಳು ಇರುವುದರಿಂದ ಇದು ನೂತನ ಶಿಲಾಯುಗದ ಮುಂದುವರೆದ ಸಂಸ್ಕೃತಿಯಾಗಿದೆ. ಈ ಪ್ರದೇಶದಲ್ಲಿನ ಪ್ರಮುಖ ನೆಲೆಗಳೆಂದರೆ ಇರಕಸಂದ್ರ ಕಾಲೋನಿ ದೊಡ್ಡ ಪಾಲನಹಳ್ಳಿ, ಸೀಗೇಪಾಳ್ಯ

ತಣ್ಣೇನಹಳ್ಳಿ, ಹೊಸಕೋಟೆ, ಸಿದ್ದರ ಬೆಟ್ಟ ಗೌಜಗಲ್ಲುಗಳಲ್ಲಿ ಕಬ್ಬಿಣ ಯುಗದ ಜನರು ವಾಸಿಸುತ್ತಿದ್ದರು.[೨೯] ಇದಕ್ಕೆ ಆಧಾರವಾಗಿ ಬೃಹತ್ ಶಿಲಾ ಸಮಾಧಿಗಳು ನಿಡಿಸುಗಲ್ಲುಗಳು ಸ್ವಸ್ತಿಕ್ ಶೈಲಿಯ ಶಿಲಾ ಗೋರಿಗಳನ್ನು ಈಗಲೂ ಕಾಣಬಹುದು.

ಈ ಪರಿಸರದ ಕೆಲವೊಂದು ಭಾಗದಲ್ಲಿ ರೈತರು ಕೃಷಿಕಾರ್ಯ ನಡೆಸಲು ನೆಲೆಗಳನ್ನು ನಾಶ ಮಾಡಿದ್ದಾರೆ. ಇರಕಸಂದ್ರ ಕಾಲೋನಿಯಲ್ಲಿ ಸ್ವಸ್ತಿಕ್ ಮಾದರಿಯ ಶಿಲಾ ಸಮಾಧಿಗಳನ್ನು ಇಂದಿಗೂ ಕಾಣಬಹುದು. ಅಲ್ಲಿನ ಸ್ಥಳೀಯರು ಈ ನೆಲೆಯನ್ನು ಪಾಂಡವರು ಬಂದು ನೆಲೆಸಿ ಹೋದ ಜಾಗ ಎಂದು, ಆ ನೆಲೆಗೆ ಪಾಂಡವರ ಗುಡ್ಡ ಎಂದು ಕರೆಯುವ ಪ್ರತೀತಿ ಇದೆ. ಈ ಸಂಸ್ಕೃತಿಯ ಜನರು ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆಗಳನ್ನು ಬಳಸುವುದರ ಜೊತೆಗೆ ಕಬ್ಬಿಣದ ಆಯುಧಗಳನ್ನು ಬಳಸುತ್ತಿದ್ದರು. ಅದೇ ರೀತಿ ಈ ನೆಲೆಯಲ್ಲಿ ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ದೊರೆತಿವೆ.

### ಇತಿಹಾಸ ಆರಂಭ ಕಾಲ

ಕೊರಟಗೆರೆ ಪ್ರದೇಶದಲ್ಲಿ ಇತಿಹಾಸ ಆರಂಭ ಕಾಲದ ಮಡಿಕೆಭಾಗಗಳು ಸಿದ್ದರ ಬೆಟ್ಟ ಗೌಜಗಲ್ಲು , ಬಂಡೇಹಳ್ಳಿಯಲ್ಲಿ ದೊರೆತಿದ್ದು, ಕೆಂಪು ಮತ್ತು ಕಪ್ಪು ಬಣ್ಣದಿಂದ ಕೂಡಿವೆ. ಇದರ ಪಕ್ಕದ ತಾಲ್ಲೂಕು ಕೇಂದ್ರವಾದ ಪಾವಗಡದ ವೈ.ಎನ್. ಹೊಸಕೋಟೆ, ನಿಡುಗಲ್ಲು ಮರಿದಾಸನಹಳ್ಳಿಯಲ್ಲಿ ಕಪ್ಪು , ಕೆಂಪು ಬಣ್ಣದ ಮಡಿಕೆಯ ಮೇಲೆ ಚುಕ್ಕಿ ಚಿತ್ರಗಳನ್ನು ಚಿತ್ರಿಸಿರುವುದು ಕಂಡು ಬಂದಿದೆ.[೧] ಈ ಮಾದರಿಯ ಮಡಿಕೆಗಳು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ಚಂದ್ರವಳ್ಳಿಯಲ್ಲಿ ಈಗಾಗಲೇ ಗುರ್ತಿಸಲಾಗಿದೆ. ಕೊರಟಗೆರೆ ಪ್ರದೇಶದಲ್ಲಿ ಈ ಕಾಲದ ಯಾವುದೇ ಶಿಲಾ ಶಸನಗಳು ದೊರಕದಿದ್ದರೂ ಈ ಪ್ರದೇಶವೆಲ್ಲಾ ಇತಿಹಾಸ ಆರಂಭ ಕಾಲದ ಶಾತವಾಹನರ ಆಳ್ವಿಕೆಗೆ ಸೇರಿತೆಂಬ ಅಂಶ ಸ್ಪಷ್ಟವಾಗಿವೆ.

ಕೊರಟಗೆರೆ ಪ್ರದೇಶದ ಪ್ರಾಗಿತಿಹಾಸದ ಪರಿಶೀಲನೆಯಿಂದ ತಿಳಿದು ಬಂದ ಪ್ರಮುಖ ಅಂಶವೆಂದರೆ ಮಾನವನ ಆರಂಭದಿಂದ ಹಿಡಿದು ನಾಗರೀಕನಾಗಿ ಬದುಕಿರುವ ಹಂತದವರೆಗಿನ ಜೀವನ ಕ್ರಮದ ಬದಲಾವಣೆಗಳ ಬಗ್ಗೆ ತಿಳಿಯಲು ಸಹಾಯಕವಾಗಿದೆ. ಮತ್ತು ಇಲ್ಲಿ ದೊರೆತ ಎಲ್ಲಾ ಸಂಸ್ಕೃತಿಗಳ ಅವಶೇಷಗಳು ಈ ಪ್ರದೇಶದ ಮಾನವನ ಇತಿಹಾಸದ ಮೇಲೆ ಬೆಳಕು ಚೆಲ್ಲಿ ಇತಿಹಾಸದ ರಚನೆಯ ಕಾರ್ಯದಲ್ಲಿ ಸಹಕಾರಿಯಾಗಿದೆ.

### ೨.೩ಇತಿಹಾಸ

ಕೊರಟಗೆರೆ ಪ್ರದೇಶದ ಇತಿಹಾಸವು ನೊಳಂಬರ ಕಾಲದಿಂದ ಪ್ರಾರಂಭವಾಗಿ ಗಂಗರು, ರಾಷ್ಟ್ರಕೂಟರು ಚೋಳರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರು ಮೈಸೂರಿನ

ಒಡೆಯರು, ಹೈದರಾಲಿ, ಟಿಪ್ಪುಸುಲ್ತಾನ್ ಹೊಳವನಹಳ್ಳಿಯ ಪಾಳೆಗಾರರ ಹಾಗು ಸ್ವತಂತ್ರ ನಂತರದವರೆವಿಗೆ ಈ ಪ್ರದೇಶದ ಇತಿಹಾಸ ವಿಸ್ತಾರಗೊಂಡಿರುವುದನ್ನು ನಾವು ಕಾಣಬಹುದಾಗಿದೆ.

**ನೊಳಂಬರು**

ಕರ್ನಾಟಕದ ಚರಿತ್ರೆಗೆ ಪ್ರಬಲ ಅರಸರು ನೀಡಿದ ಕೊಡುಗೆಯಂತೆ ಅವರ ಸಾಮಂತ ಮನೆತನಗಳ ರಾಜರು ಮಾಡಿದ ಸಾಧನೆ ಅಭೂತ ಪೂರ್ವವಾದದ್ದು ಎಂದರೆ ತಪ್ಪಾಗಲಾರದು. ಇಂತಹ ಕೊಡುಗೆ ನೀಡಿದ ಮನೆತನಗಳಲ್ಲಿ ನೊಳಂಬರು ಪ್ರಮುಖರಾಗಿದ್ದಾರೆ. ಆಗ್ನೇಯ ಕರ್ನಾಟಕದಲ್ಲಿ ಕ್ರಿ.ಶ. ೮ ನೇ ಶತಮಾನದಿಂದ ೧೧ ನೇ ಶತಮಾನದ ವರೆಗೆ ಆಳ್ವಿಕೆ ನಡೆಸಿದ ನೊಳಂಬರ ಮೂಲ ಪುರುಷ ಪಲ್ಲವರಾಜ ತ್ರಿನಯನ.[೩೦] ಇವನ ವಂಶವೃಕ್ಷವು ಹೇಮಾವತಿ ಸ್ಥಂಭ ಶಾಸನದಲ್ಲಿ ಕಂಡು ಬರುತ್ತದೆ. ನೊಳಂಬ ರಾಜಧಾನಿ ಈಗಿನ ಮಡಕಶಿರಾ ತಾಲ್ಲೂಕಿನ ಹೆಂಜೇರು ಅಥವಾ ಹೇಮಾವತಿಯಾಗಿದ್ದು , ಅನಂತರ ೧೧ ನೇ ಶತಮಾನದಲ್ಲಿ ಕಂಪಲಿಗೆ ವರ್ಗಾಯಿಸಿದರು.

ಇವರ ಆಳ್ವಿಕೆಯ ಬಹುಪಾಲು ಸಾಮಂತರಾಗಿಯೇ ಮುಂದುವರೆದರು. ಮೊದಲು ಗಂಗರು ನಂತರಲ್ಲಿ ರಾಷ್ಟ್ರಕೂಟರು ಹಾಗು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿಯೇ ಆಳ್ವಿಕೆ ಮಾಡಿದ್ದಾರೆ. ೧೦ ನೇ ಶತಮಾನದ ವೇಳೆಗೆ ಇವರ ಪ್ರಾಬಲ್ಯ ನೊಳಂಬವಾಡಿ ೩೨೦೦೦ ಪ್ರಾಂತ್ಯವಾಯಿತು. ಅದರಲ್ಲಿ ಈಗಿನ ಕೋಲಾರ, ತುಮಕೂರು, ಚಿತ್ರದುರ್ಗದ ಅನೇಕ ಭಾಗಗಳು ಒಳಗೊಂಡಿದ್ದವು.[೩೧] ಮಧುಗಿರಿ ತಾಲ್ಲೂಕಿನ ಶಾಸನದಲ್ಲಿ 'ನೊಳಂಬಾಧಿರಾಜ' ನೊಳಿಪಯ್ಯನು ರಾಜ್ಯವಾಳುತ್ತಿದ್ದನೆಂದು ತಿಳಿಸುತ್ತದೆ.[೩೨]

ನೊಳಿಪಯ್ಯನೇ ಮಹೇಂದ್ರನ ಮಗ ಅಯ್ಯಪ್ಪ ದೇವ. ಕ್ರಿ.ಶ. ೮೯೭-೯೩೪ ರವರೆಗೆ ಆಳ್ವಿಕೆ ಮಾಡಿದ್ದನು. ಕ್ರಿ.ಶ. ೮೯೭ ರ ಮಧುಗಿರಿ ಶಾಸನ ಬಿಟ್ಟರೆ ಕ್ರಿ.ಶ. ೯೧೮ ರ ವರೆಗೆ ಯಾವ ಶಾಸನಗಳು ಆತನ ಬಗ್ಗೆ ತಿಳಿಸುವುದಿಲ್ಲ." ಕ್ರಿ.ಶ. ೯೩೬ ರಲ್ಲಿ ಅಣಿಗನು ನೆಮ್ಮದಿಯಿಂ ರಾಜ್ಯವಾಳುತ್ತಿದ್ದನೆಂದು" ಮಡಕಶಿರಾದ ಒಂದು ಶಾಸನ ತಿಳಿಸುತ್ತದೆ.[೩೩] ಇವನ ಕಾಲದ ಸಾಮ್ರಾಜ್ಯವು ದಕ್ಷಿಣದಲ್ಲಿ ಧರ್ಮಪುರಿಯಿಂದ ಉತ್ತರದಲ್ಲಿ ಬಳ್ಳಾರಿಯವರೆಗೆ ಪೂರ್ವದಲ್ಲಿ ಚಿತ್ತೂರಿನಿಂದ ಪಶ್ಚಿಮದ ಚಿತ್ರದುರ್ಗದ ವರೆಗೆ ಹಾಗು ನೈರುತ್ಯದಲ್ಲಿ ಮಂಡ್ಯ ಜಿಲ್ಲೆಯ ತಾಯಲೂರನ್ನು ಒಳಗೊಂಡಂತೆ ವಿಸ್ತಾರವಾದ ಪ್ರಾಂತ್ಯವಾಗಿತ್ತು. ಕ್ರಿ.ಶ. ೯೨೫ ರ ಕಾಲದ ಬೀರನೊಳಂಬನಿಗೆ ಸಂಬಂಧಿಸಿದ ವೀರಗಲ್ಲು ಒಳಲ್ ಸಮುದ್ರದಲ್ಲಿ ದೊರೆತಿದೆ. ಶ್ರೀ ಸಿದ್ದಲಿಂಗಯತಿ ಬಾಳೇಶ್ವರ ಸ್ವಾಮಿಯನ್ನು ಗುರುವಾಗಿ ಅಂಗೀಕರಿಸಿದ್ದರಿಂದ ವೀರಪ್ಪಗೌಡನ ನೇತೃತ್ವದಲ್ಲಿ ಒಪ್ಪಿಕೊಂಡ ಸಹೋದರರು ೭ ನಾಡುಗಳಲ್ಲಿ ದೇವಾಲಯ ಸ್ಥಾಪಿಸಿ ಮಹಾನಾಡಪ್ರಭುಗಳಾಗಿ ಬೆಳೆದರು.

### ಗಂಗರು

ಕದಂಬರ ಸಮಕಾಲೀನರಾದ ಗಂಗರು ತಮ್ಮನ್ನು ಕುವಲಾಲ ಪುರಧೀಶ್ವರರೆಂದು ಕರೆದುಕೊಂಡು ರಾಜ್ಯವಾಳುತ್ತಿದ್ದರು. ಗಂಗ ದೊರೆಗಳಾದ ಮುಮ್ಮಡಿ, ಮಾಧವ, ದುರ್ವಿನೀತ , ಬೂವಿಕ್ರಮ, ದುಗ್ಗಮಾರ, ಎರೆಯಪ್ಪ, ರಾಚಮಲ್ಲ, ಇವರುಗಳು ಆಳ್ವಿಕೆ ಮಾಡಿದ್ದಾರೆ. ದುಗ್ಗ ಮಾರನ ಮಗ ಎರೆಯಪ್ಪನ ನೇರ ಆಳ್ವಿಕೆ ಈ ನಾಡಿನ ಮೇಲಿತ್ತು. ಅಲ್ಲದೆ ಆತನ ಮಹಾದೇವಿಯಾದ ಕಾಂಚಿಯಬ್ಬೆ ಎಂಬುವಳು ಅಗಳಿ ಎಂಬ ಸ್ಥಳವನ್ನು ಆಳುತ್ತಿದ್ದಳು. ಅಗಳಿಯು ಈಗಿನ ಸಿರಾ ತಾಲ್ಲೂಕು ಕೇಂದ್ರದ ಪಕ್ಕದಲ್ಲಿದ್ದು ಅವರ ಆಳ್ವಿಕೆಗೆ ಒಳಪಟ್ಟಿದೆ. [೩೪] ಮಾಗಡಿ ತಾಲ್ಲೂಕಿನ ಕುಪ್ಪೆಪಾಳ್ಯದಲ್ಲಿ ನೆಟ್ಟಿರುವ ಶಾಸನದ ಪ್ರಕಾರ ಗಂಗರ ಎರಡನೇ ಶಿವಮಾರ ಕುಣೆಂಗಿಲ್ ನಾಡಿನ ರಾಜ್ಯಪಾಲನಾಗಿದ್ದನೆಂದು ತಿಳಿಸುತ್ತದೆ. ಈ ಶಾಸನ ಪ್ರಕಾರ ಕೊರಟಗೆರೆಯವರೆಗೆ ರಾಜ್ಯಭಾರ ಮಾಡಿದನೆಂದು ತಿಳಿಯಬಹುದು. [೩೫] ಅಲ್ಲದೆ ಚನ್ನರಾಯನದುರ್ಗ ಪರಿಸರದ ಗ್ರಾಮವಾದ ತುಂಬಾಡಿಯ ಶಾಸನದಲ್ಲಿ ಗಂಗ ದೊರೆ ಎರೆಯಪ್ಪನ ಆಜ್ಞೆಯ ಮೇರೆಗೆ ನೊಳಂಬರೊಡನೆ ನಾಗತ್ತರ ಎಂಬುವನು ಯುದ್ಧದಲ್ಲಿ ಮಡಿದನೆಂದು ತಿಳಿಸುವ ಒಂದು ಶಾಸನವಿದ್ದು ಈ ಶಾಸನದ ಪ್ರಕಾರ ತುಂಬೇವಾಡಿ ಈ ಗ್ರಾಮದ ಪ್ರಾಚೀನ ಹೆಸರಾಗಿತ್ತು ಎಂದು ತಿಳಿಯಬಹುದು. ಬೆಂಗಳೂರಿನ ೮೩ ನೇ ಶಾಸನದಲ್ಲಿನ ಪ್ರಕಾರ ಈರಪ್ಪ ನಗರ್ತರು ನೊಳಂಬರೊಂದಿಗೆ ಹೋರಾಡಿ ಮರಣಿಸಿದ ಜಾಗವಾದ ತುಂಬೆಪಡಿ ಎಂದು ಹೇಳಲಾಗಿದೆ. [೩೬]

### ಕಲ್ಯಾಣಿ ಚಾಲುಕ್ಯರು

ರಾಷ್ಟ್ರಕೂಟರ ಸಾಮಂತರಾಗಿ ಆಳ್ವಿಕೆ ಆರಂಭಿಸಿದ ಕಲ್ಯಾಣಿ ಚಾಲುಕ್ಯರು ಕ್ರಿ.ಶ. ೯೭೩ ರಲ್ಲಿ ಎರಡನೇ ತೈಲಪ್ಪನು ರಾಷ್ಟ್ರಕೂಟರ ಕೊನೆಯ ದೊರೆ ಇಮ್ಮಡಿ ಕರ್ಕನನ್ನು ಸೋಲಿಸಿ ಸ್ವತಂತ್ರ ಆಳ್ವಿಕೆಯನ್ನು ಆರಂಭಿಸಿದನು. ಇವನು ಕ್ರಿ.ಶ. ೧೧೫೩ ರ ವರೆಗೂ ಸ್ವತಂತ್ರ ಆಡಳಿತ ನಡೆಸಿ, ಬೀದರ್ ಜಿಲ್ಲೆಯ ಕಲ್ಯಾಣವನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದರಿಂದ ಇವರು ಕಲ್ಯಾಣಿ ಚಾಲುಕ್ಯರೆಂದು ಹೆಸರಾದರು. [೩೭] ಇವರ ಆಳ್ವಿಕೆಗೆ ಸಂಬಂಧಿಸಿದ ಯಾವುದೇ ಶಾಸನಗಳು ಚನ್ನರಾಯನದುರ್ಗ ಪರಿಸರದಲ್ಲಿ ದೊರೆತಿಲ್ಲವಾದ್ದರಿಂದ ನೊಳಂಬವಾಡಿಯನ್ನು ಚೋಳರು ಜಯಿಸಿದಂತೆ ತೋರುತ್ತದೆ. ಕಾರಣ ಈ ವೇಳೆಗಾಗಲೇ ಚೋಳರು ತುಂಬಾ ಪ್ರಾಭಲ್ಯ ಗಳಿಸಿದ ಬಗ್ಗೆ ನಿಡುಗಲ್ಲು, ಹಿರಿಯೂರು ಗುಂಡ್ಲಹಳ್ಳಿಯಲ್ಲಿ ದೊರೆತ ಶಾಸನಗಳಿಂದ ತಿಳಿಯಬಹುದಾಗಿದೆ. [೩೯]

**ಚೋಳರು**

ದಕ್ಷಿಣ ಕರ್ನಾಟಕದ ಭಾಗವು ಚೋಳರ ಆಳ್ವಿಕೆಗೆ ಒಳಪಟ್ಟಿದ್ದು , ವೆಂಗಡಂ ಚೋಳ ಸಾಮ್ರಾಜ್ಯದ ಉತ್ತರದ ಗಡಿಯಾಗಿತ್ತು ಎಂದು ತಿಳಿಸಲಾಗಿದೆ. ಕರ್ನಾಟಕದಲ್ಲಿ ಚೋಳರ ಆಳ್ವಿಕೆಯ ಮೊದಲ ಕುರುಹು ಬೆಂಗಳೂರಿನ 'ಕುಡಲೂರಿ'ನಲ್ಲಿ ದೊರೆತ ವಿಜಯಾಲನ ಶಾಸನ ತಿಳಿಸುತ್ತದೆ. [೪೦] ಈ ಶಾಸನವು ತಮಿಳು ಭಾಷೆಯಲ್ಲಿ ಇರುವುದನ್ನು ಕಾಣಬಹುದು. ಚೋಳರ ದೊರೆ ೧ ನೇ ರಾಜರಾಜನ ಕಾಲದಲ್ಲಿ ಮೊದಲ ಬಾರಿಗೆ ತುಮಕೂರು, ಕುಣಿಗಲ್ಲು , ಮಧುಗಿರಿ ಪ್ರಾಂತ್ಯಗಳು ಇವನ ವಶವಾದವು. ಈ ಪ್ರದೇಶಗಳು ಒಂದನೇ ರಾಜೇಂದ್ರ ಚೋಳನಿಂದ ಪ್ರಾರಂಭವಾಗಿ ಒಂದನೇ ರಾಜಾಧಿರಾಜ ಚೋಳ, ರಾಜೇಂದ್ರ ದೇವಚೋಳ, ವೀರರಾಜೇಂದ್ರಚೋಳ, ಒಂದನೇ ಕುಲೋತುಂಗ ಚೋಳನ ಕಾಲದವರೆಗೂ ಚೋಳ ಸಾಮ್ರಾಜ್ಯದ ಭಾಗಗಳಾಗಿದ್ದವು.[೩೮] ನಂತರದ ಕಾಲದಲ್ಲಿ ಈ ಭಾಗವು ಹೊಯ್ಸಳ, ವಿಜಯನಗರ, ಪಾಳೆಗಾರರ ಆಳ್ವಿಕೆಗೆ ಒಳಪಟ್ಟವು. ಚೋಳರಿಗೆ ಸಂಬಂಧಿಸಿದ ಶಾಸನಗಳು ನರೆಯ ಪ್ರಾಂತ್ಯವಾದ ಮಧುಗಿರಿಯ ತೆರೆಯೂರಿನಲ್ಲಿ ದೊರೆತಿವೆ. ಈ ಆಧಾರದ ಮೇಲೆ ಇಲ್ಲಿನ ಅನೇಕ ಭಾಗಗಳು ಇವರ ಆಳ್ವಿಕೆಗೆ ಸೇರಿವೆ ಎಂದೇಳಬಹುದು.

ಇವರು ತುಮಕೂರನ್ನು ಭಾಗವಾಗಿ ಮಾಡಿ ಮತ್ತೊಂದು ಮಂಡಲವನ್ನು ಸ್ಥಾಪಿಸಿದರು. ಆ ಮಂಡಲವೇ ವಿಜಯರಾಜೇಂದ್ರ ಮಂಡಲ. ೨ ನೇ ರಾಜೇಂದ್ರ ದೇವನ ಕಾಲದಲ್ಲಿ ಮಧುಗಿರಿ ಮತ್ತು ಕೋಲಾರ ಎಂದು ವಿಭಾಗಿಸಿದ್ದನು. ಕರ್ನಾಟಕದಲ್ಲಿ ಶೈವ ಧರ್ಮ ಪ್ರಚಾರಗೊಳ್ಳಲು ಚೋಳರ ಕೊಡುಗೆ ಅಪಾರ ಎಂದೇಳಿದರೆ ತಪ್ಪಾಗಲಾರದು. ತನ್ನ ಸಾಮ್ರಾಜ್ಯದ್ಯಂತ ಅನೇಕ ಕಡೆಗಳಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಚನ್ನರಾಯನದುರ್ಗ ಪರಿಸರದ ತುಂಬಾಡಿ ಹಾಗು ಜುಂಜರಾಮನ ಹಳ್ಳಿಯಲ್ಲಿ ಕ್ರಮವಾಗಿ ನಂದೀಶ್ವರ ಹಾಗು ಮಲ್ಲೇಶ್ವರ ದೇವಾಲಯಗಳನ್ನು ನಿರ್ಮಿಸಿದ್ದಾರೆ.

**ಹೊಯ್ಸಳರು**

ಕ್ರಿ.ಶ. ೧೧ ನೇ ಶತಮಾನದಲ್ಲಿ ಪ್ರಾಬಲ್ಯಕ್ಕೆ ಬಂದ ಹೊಯ್ಸಳರು ಮೂರು ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ಮಾಡಿದರು. ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ಆರಂಭಿಸಿ, ನಂತರದಲ್ಲಿ ಸ್ವತಂತ್ರ ಘೋಷಿಸಿಕೊಂಡು ದ್ವಾರ ಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ವಿಷ್ಣುವರ್ಧನ ಪಟ್ಟಕ್ಕೆ ಬಂದ ಮೇಲೆ ರಾಜ್ಯ ವಿಸ್ತರಣಾ ಕಾರ್ಯ ಕೈಗೊಂಡನು. ಈ ಸಮಯದಲ್ಲಿ ಇರುಂಗೊಳ ಚೋಳನು ನಿಡುಗಲ್ ದುರ್ಗದ ದೊರೆಯಾಗಿದ್ದನು. ಈ ರಾಜ್ಯ ಚಾಲುಕ್ಯರ ಹಾಗು ಹೊಯ್ಸಳ ರಾಜ್ಯಕ್ಕೂ ಮಧ್ಯವಿದ್ದರಿಂದ ಹೊಯ್ಸಳರಿಗೆ ಚನ್ನರಾಯನದುರ್ಗ ಪರಿಸರವನ್ನು ವಶಪಡಿಸಿಕೊಂಡ ನಂತರ ಮುಂದಿನ ರಾಜ್ಯ ವಿಸ್ತರಿಸಲು ಸಾಧ್ಯವಾಗುತ್ತಿತ್ತು. ಆದ್ದರಿಂದ ನಿಡುಗಲ್ ಸೈನ್ಯವನ್ನು ವಿಷ್ಣುವರ್ಧನ ಸೋಲಿಸಿದ ಎಂದು ಮಲ್ಲದೇವನ ಕಾಲದ ಶಾಸನ ತಿಳಿಸುತ್ತದೆ.

**ವಿಜಯನಗರ ಕಾಲ**

ಹೊಯ್ಸಳರ ನಂತರ ಅಧಿಕಾರಕ್ಕೆ ಬಂದ ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೩೩೬ ರಿಂದ ೧೫೧೫ರ ವರೆಗೆ ಸುಮಾರು ೨೨೯ ವರ್ಷಗಳ ಕಾಲ ಆಳ್ವಿಕೆ ನಡೆಸಿತು. ವಿಜಯನಗರ ಸ್ಥಾಪನೆಯು ಭಾರತದ ಇತಿಹಾಸದಲ್ಲಿ ಚಿರಸ್ಮರಣೀಯವಾದುದಾಗಿದೆ. ಮಹಮದೀಯರ ದಾಳಿಯಿಂದ ಜರ್ಝರಿತವಾಗಿದ್ದ ಹಿಂದೂ ಧರ್ಮ ಮತ್ತು ಸಂಸ್ಕೃತಿಯ ರಕ್ಷಣೆಗಾಗಿ ಉದಯಿಸಿದ ಕಡೆಯ ಹಿಂದೂ ಸಾಮ್ರಾಜ್ಯವಾಗಿದೆ. ಇದು ದಕ್ಷಿಣ ಭಾರತದಲ್ಲಿ ರಾಜಕೀಯ ಅಸ್ಥಿರತೆಯನ್ನು ತೊಡೆದು ಹಾಕಿತಲ್ಲದೆ, ಮೂರು ಶತಮಾನಗಳಿಗೂ ಹೆಚ್ಚು ಕಾಲ ನಡೆದ ಮುಸ್ಲಿಂಮರ ದಾಳಿಯನ್ನು ತಡೆಯಿತು. ಹಂಪಿ ಇವರ ರಾಜಧಾನಿಯಾಗಿದ್ದು, ಕೊರಟಗೆರೆ ಪ್ರದೇಶವು ಪ್ರಾರಂಭದಿಂದಲೂ ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತು. ಈ ಪ್ರದೇಶವು ಬೆಟ್ಟ ಗುಡ್ಡಗಳಿಂದ ಕೂಡಿದ್ದು, ಸಹಜವಾಗಿಯೇ ಕೋಟೆ ಕೊತ್ತಲಗಳನ್ನು ಕಟ್ಟಿಕೊಳ್ಳಲು ಸಹಾಯಕವಾಯಿತು. ಈ ಪ್ರದೇಶದಲ್ಲಿ ಸಾಮ್ರಾಜ್ಯವನ್ನು ರಾಜ್ಯ, ವೇಂಟ, ನಾಡು, ಸೀಮೆ, ಚಾವಡಿ, ಹೋಬಳಿ, ಕಸುಬೆ ಮುಂತಾದ ಪ್ರಾದೇಶಿಕ ವಿಭಾಗಗಳಾಗಿ ಸ್ಥಾಪಿಸಿಕೊಂಡು, ಆಳ್ವಿಕೆ ಮಾಡಿರುವುದು ಈ ಪ್ರದೇಶದಲ್ಲಿ ದೊರೆತ ಶಾಸನಗಳಿಂದ ತಿಳಿದು ಬರುತ್ತದೆ.

ವಿಜಯನಗರ ಚಕ್ರವರ್ತಿಗಳಿಂದ ಸನ್ಮಾನಿತರಾದ ಮಹಾನಾಡ ಪ್ರಭುಗಳು ಮುಂದೆ ಊರುಗಳನ್ನು ಸ್ಥಾಪಿಸಲು ಮುಂದಾದರು. ಕಾರಣ ಅನೇಕ ನಗರಗಳನ್ನು ನಿರ್ಮಿಸಿದರೆ ನಿಮಗಿರುವ ಮಹಾನಾಡ ಪ್ರಭುಗಳೆಂಬ ಬಿರುದು ಹಾಗೆ ಉಳಿಯುತ್ತದೆ. ಎಂದು ಹರಿಹರ ತಿಳಿಸಿದ್ದರಿಂದ ಮುಂದೆ ಸಹೋದರರಾದ ಕಾಳಣ್ಣಗೌಡರು ಕೋರಾ ಗ್ರಾಮದಲ್ಲಿ ನೆಲೆಯೂರಿ ನಿಂತರು. ಚನ್ನಪ್ಪ ಗೌಡ ತೆರೆಯೂರಿನಲ್ಲಿಯೂ ಸಂಗಪ್ಪಗೌಡ ಚೇಳೂರಿನಲ್ಲಿ, ಕಾಳ ಚಿಕ್ಕಪ್ಪಗೌಡ ಗುಬ್ಬಿ ಹೊಸಹಳ್ಳಿಯಲ್ಲೂ ರಾಮಪ್ಪಗೌಡರು ಎಣ್ಣೆಗೆರೆಯಲ್ಲಿ ಕೋಟೆ ಸ್ಥಾಪಿಸಲು ಮುಂದಾದರು.[೩೯] ಕೊರಟಗೆರೆ ಪರಿಸರದ ಸಿದ್ದರ ಬೆಟ್ಟದಲ್ಲಿ ಅಲ್ಲಮರು, ರೇವಣ್ಣಸಿದ್ದೇಶ್ವರರು, ಮರುಳ ಸಿದ್ದಲಿಂಗೇಶ್ವರರು ಇನ್ನು ಅನೇಕ ಸಿದ್ದರು ತಪಸ್ಸು ಮಾಡಿದರೆಂಬ ಪ್ರತೀತಿ ಇದೆ. ಇದರಿಂದ ವಿಜಯನಗರದ ಅರಸರಾದ ಪ್ರೌಢದೇವರಾಯ ಇವರಿಗೆ ಅನುಗ್ರಹವಿತ್ತು, ನೂರೊಂದು ವಿರಕ್ತರಿಗೆ ತತ್ವೋಪದೇಶ ಮಾಡಿದ ಹರದನಹಳ್ಳಿಯ ಹದಿಮೂರನೇ ಗುರುಗಳಾದ ಗೋಸಲ ಸಿದ್ದೇಶ್ವರರ ಗದ್ದುಗೆಯನ್ನು ಸಿದ್ಧರಬೆಟ್ಟದಲ್ಲಿ ಸ್ಥಾಪಿಸಿದರು.

೧೫೮೬ ರಲ್ಲಿ ಆಳ್ವಿಕೆಗೆ ಬಂದ ಶ್ರೀರಂಗರಾಯರ ಕಿರಿಯ ಸೋದರನಾದ ವೆಂಕಟಪತಿರಾಯ ವಿಜಯನಗರದ ಚಕ್ರಾಧಿಪತಿಯಾಗಿದ್ದನು. ಇವನ ಅನುಮತಿ ಪಡೆದು ಗುರುಗಳಾದ ತೋಂಟದ ಸಿದ್ದೇಶ್ವರರ ಹೆಸರಿನಲ್ಲಿ ಬಿಜ್ಜವರದ ಪಶ್ಚಿಮಕ್ಕೆ ಕೋಟೆ ಕಟ್ಟಿಸಿ ಪಂಚ ದೇವಾಲಯಗಳನ್ನು ನಿರ್ಮಿಸಿದರು. ಮದ್ದಗಿರಿ ಎಂಬ ಗ್ರಾಮ ನಿರ್ಮಿಸಿ ಬೆಟ್ಟದ ಮೇಲೆ ಗೋಪಾಲಕೃಷ್ಣದೇವಾಲಯ ಕಟ್ಟಿಸಿದನು.[೪೦] ಪ್ರಕೃತಿ ಪ್ರೇಮಿಯಾದ ಗೌಡರು ಮದ್ದಗಿರಿಗೆ ಸಮೀಪದಲ್ಲಿದ್ದ ಮತ್ತೊಂದು ಬೆಟ್ಟವನ್ನು ನೋಡಿದರು. ನಂತರ ತನ್ನ

ಎರಡನೇ ಪುತ್ರನಾದ ಚನ್ನಪ್ಪಗೌಡನ ಹೆಸರಿನಲ್ಲಿ ಕ್ರಿ.ಶ. ೧೬೧೩ ರಲ್ಲಿ ಚನ್ನರಾಯನ ದುರ್ಗ ಕೋಟೆಯನ್ನು ಕಟ್ಟಿಸಿ ಚನ್ನಕೇಶವ ಸ್ವಾಮಿಯನ್ನು ಪ್ರತಿಷ್ಠಾಪನೆ ಮಾಡಿ ಇದಕ್ಕೆ "ಚನ್ನರಾಯನ ದುರ್ಗ" ಎಂಬ ಹೆಸರಿಟ್ಟನು. ಪರಾಕ್ರಮಿಯಾದ ಕಾಳ ಚಿಕ್ಕಪ್ಪಗೌಡರು ಮಿಡಿಗೇಶಿ ಮತ್ತು ಚನ್ನರಾಯನದುರ್ಗದ ಆಡಳಿತ ನಿರ್ವಹಿಸುತ್ತಿದ್ದ ೨ ನೇ ಶ್ರೀರಂಗನ ಅಪ್ಪಣೆಯ ಮೇರೆಗೆ, ಇವುಗಳನ್ನು ಅಭಿವೃದ್ಧಿ ಪಡಿಸಿ ಯುದ್ಧದ ಉಪಕರಣಗಳನ್ನು ಸಂಗ್ರಹಿಸಿ ಈ ಕೋಟೆಗಳಲ್ಲಿ ಇಟ್ಟಿದ್ದನು.

೧೫-೧೬ ನೇ ಶತಮಾನಗಳಲ್ಲಿ ವಿಜಯನಗರದ ಅರಸರು ತಮ್ಮ ಆಶ್ರಯದಲ್ಲಿದ್ದ ಅರಸು ಮತ್ತು ಸಾಮಂತ ಪಾಳೆಗಾರರಿಗೆ ಭೂ ಪ್ರದೇಶ ಗ್ರಾಮಗಳನ್ನು ಉಂಬಳಿಯಾಗಿ ನೀಡಿದ್ದಲ್ಲದೆ, ಬಿರುದು ಬಾವಲಿಗಳನ್ನು ನೀಡಿದರು. ತುಮಕೂರು ಜಿಲ್ಲೆಯ ಸಾಮಂತ ಸಂಸ್ಥಾನಗಳ ಅಧೀನ ಪಾಳೆ ಪಟ್ಟುಗಳಲ್ಲಿ ನಿಡುಗಲ್ಲು, ಪಾವಗಡ, ಮಧುಗಿರಿ, ಹೊಳವನಹಳ್ಳಿ, ಹೆಬ್ಬೂರು ಮುಂತಾದವುಗಳಾಗಿವೆ.

### ಬಿಜ್ಜಾವರ ಮಹಾನಾಡ ಪ್ರಭುಗಳು

ಮಧುಗಿರಿ ತುಮಕೂರು ಜಿಲ್ಲೆಯ ಉಪವಿಭಾಗ ಕೇಂದ್ರವಾಗಿದ್ದು, ಕ್ರಿ.ಶ. ೧೫ ನೇ ಶತಮಾನದಲ್ಲಿ ವಿಜಯನಗರದ ಅರಸರ ಮನ್ನಣೆ ಪಡೆಯಿತು. ಈ ವಂಶದ ಮೂಲ ಪುರುಷ ಮಾರೇಗೌಡ. ಈತನು ೧೩೭೧ ರಲ್ಲಿ ಮುಮ್ಮಡಿ ಪಟ್ಟಣವನ್ನು ರಾಜಧಾನಿಯನ್ನಾಗಿಸಿಕೊಂಡು ಆಡಳಿತವನ್ನು ಪ್ರಾರಂಭಿಸಿದನು.[೪೧] ದೊಡ್ಡೇಗೌಡನ ಆಳ್ವಿಕೆಯಲ್ಲಿ ಮುಮ್ಮಡಿ ಪಟ್ಟಣ ನಾಶವಾದಾಗ ಇವನ ಮಗ ಚಿಕ್ಕಪ್ಪ ಗೌಡ ಕೃಷ್ಣದೇವರಾಯರ ಅಪ್ಪಣೆ ಪಡೆದು ೧೫೨೪ ರಲ್ಲಿ ಬಿಜ್ಜಾವರ ನಗರವನ್ನು ನಿರ್ಮಿಸಿ, ರಾಜಧಾನಿಯನ್ನು ಸ್ಥಳಾಂತರಿಸಿದನು. ಇವನ ನಂತರ ಹಿರೇಚಿಕ್ಕಪ್ಪಗೌಡ, ಕರಿತಿಮ್ಮನಗೌಡ, ಇಮ್ಮಡಿ ಚಿಕ್ಕಪ್ಪ , ಕಾಳೇಗೌಡ, ಮುಂತಾದವರು ಆಡಳಿತವನ್ನು ನಡೆಸಿದರು.

ಚಿಕ್ಕಪ್ಪಗೌಡನ ಎರಡನೇ ಮಗನಾದ ಚನ್ನಪ್ಪಗೌಡನು ಬಾಲ್ಯದಲ್ಲೇ ಸಾವನ್ನಪ್ಪಿದರಿಂದ ಅವನ ನೆನಪಿಗಾಗಿ ಆನಂದನಾಮ ಸಂವತ್ಸರದ ಮಾಘ ಬಹುಳ ಪಂಚಮಿ ಗುರುವಾರದ ೧೬೧೩ ರಲ್ಲಿ ಚನ್ನರಾಯನದುರ್ಗದ ಕೋಟೆಯನ್ನು ನಿರ್ಮಿಸಿದನು. ಇದರ ಆಡಳಿತವನ್ನು ನೋಡಿಕೊಳ್ಳಲು ತನ್ನ ಮಗನಾದ ಕಾಳ ಚಿಕ್ಕಪ್ಪಗೌಡನನ್ನು ನೇಮಿಸಿದನು. ಈ ದುರ್ಗದಲ್ಲಿ ವಿಜಯನಗರದ ಅರಸನಾದ ಶ್ರೀರಂಗರಾಯನ ಅಪ್ಪಣೆ ಮೇರೆಗೆ ಧನ- ಧಾನ್ಯ ಮದ್ದು ಮುಂತಾದ ಯುದ್ದೋಪಕರಣಗಳನ್ನು ಇಲ್ಲಿ ಸಂಗ್ರಹಿಸಲಾಯಿತು. ನಂತರದಲ್ಲಿ ಈ ಕೋಟೆ ಮರಾಠರ ಅದೀನವಾಯಿತು. ಅದಕ್ಕೆ ಸಾಕ್ಷಿಯಾಗಿ ಕ್ರಿ.ಶ. ೧೭೬೩ ರಲ್ಲಿ ರಚಿಸಿದ ಶಾಸನವು ಕೋಟೆಯ ದಕ್ಷಿಣ ಬಾಗಿಲಿನ ಬಳಿ ಇದೆ. ಇದರಲ್ಲಿ ಮಾಧವರಾವ್ ಬಲ್ಲಾಳ ಶ್ರೀಮಂತ ಪ್ರಧಾನಧರಣೀತತ್ವರರಾವ್ ಮತ್ತು ಶಿವತ್ತರಾವ್ ಹವಲ್ದಾರ್‌ರ ಉಲ್ಲೇಖವಿದೆ. ಮರಾಠರ ಆಕ್ರಮಣದ ಸಂದರ್ಭದಲ್ಲಿ ಅಲ್ಲಿನ ನಾಯಕನಾಗಿದ್ದ ರಾಮೇಗೌಡನು ಮಧುಗಿರಿಗೆ ಹೋಗಿ ಆಶ್ರಯ ಪಡೆದನು.[೪೨]

ಕೇವಲ ೮ ವರ್ಷಗಳವರೆಗೆ ಆಳ್ವಿಕೆ ನಡೆಸಿದ ನಂತರ ಮೈಸೂರು ರಾಜರ ದಂಡನಾಯಕ ಕೊಮಾರಯ್ಯನು ವಶಪಡಿಸಿಕೊಂಡು, ಮೈಸೂರು ಅರಸು ಆದ ದೊಡ್ಡರಸು ಎಂಬಾತನನ್ನು ನಾಯಕನನ್ನಾಗಿ ನೇಮಿಸಿ ಈ ದುರ್ಗದ ಹೆಸರನ್ನು 'ಪ್ರಸನ್ನಗಿರಿ' ಎಂದು ಬದಲಾಯಿಸಿದನು.

ಹೈದರಾಲಿಯು ಚನ್ನರಾಯನದುರ್ಗವನ್ನು ವಶಪಡಿಸಿಕೊಳ್ಳುವುದರ ಸಲುವಾಗಿ, ಸರ್ವಜಿತು ಸಂವತ್ಸರದ ವೈಶಾಖ ಜೇಷ್ಠದಲ್ಲಿ ವೆಂಕಟೇಶಯ್ಯನವರ ಜೊತೆಗೂಡಿ ಬಂದು ಮದ್ದಗಿರಿ ಹಾಗು ಚನ್ನರಾಯನದುರ್ಗವನ್ನು ವಶಪಡಿಸಿಕೊಂಡರೇ, ಪಕ್ಕದ ದೇವರಾಯನದುರ್ಗ ಹಾಗು ಮಾಕಳಿ ದುರ್ಗ ನಮ್ಮದಾಗುತ್ತವೆಂದು ಈ ಕೋಟೆಯನ್ನು ಆಕ್ರಮಿಸಿದನು.[೪೩] ಅಲ್ಲಿನ ಪಾಳೆಗಾರನಾದ ಚಿಕ್ಕಪ್ಪಗೌಡನ ಕುಟುಂಬವನ್ನು ಮತ್ತು ಆತನನ್ನು ಕೊರಟಗೆರೆ ಪಾಳೆಪಟ್ಟು ಗೌಪ್ಯವಾಗಿ ಇಟ್ಟಿದ್ದನು. ಮರಾಠರು ಮತ್ತೆ ಆತನನ್ನು ಬಂಧಿಸಿ ಮಧುಗಿರಿ ಶಾಖೆಗೆ ಹಾಕಿದರು.[೪೪] ಹೈದರಾಲಿಯು ಮುಂದೆ ಇವರನ್ನು ಸೋಲಿಸಿ ಮಧುಗಿರಿ, ಚನ್ನರಾಯನದುರ್ಗ, ನಂದಿದುರ್ಗ, ದೇವರಾಯನದುರ್ಗಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ನಂತರದಲ್ಲಿ ಈ ಪ್ರಾಂತ್ಯಕ್ಕೆ ಮಹಿಮಾಜಿ ಸಿಂದ್ಯನ ಮಗ ಬಾಪೂಜಿ ಸಿಂದ್ಯಾ, ರಘೋಬಾರವರು ತೆರಿಗೆ ೩ ತಿಂಗಳ ಕಾಲ ನೀಡಿಲ್ಲವಾದ್ದರಿಂದ ಆತನನ್ನು ಮಧುಗಿರಿ ಪಟ್ಟಣದಲ್ಲಿ ೨ ದಿನ ಬಂಧನಕ್ಕೆ ಒಳಪಡಿಸಿ ಅವನ ಪ್ರಾಂತ್ಯವಾದ ಹೊಸಕೋಟೆಗೆ ಮುತ್ತಿಗೆ ಹಾಕಿದನು.[೪೫] ಮಧುಗಿರಿ ಹಾಗು ಚನ್ನರಾಯನದುರ್ಗ ಸರಹದ್ದು ಗಡಿ ಎರಡಕ್ಕೂ ಕಲ್ಲುಗಾರೆ, ಕೋಟೆ, ಬತೇರಿ ಇತ್ಯಾದಿಗಳನ್ನು ನಿರ್ಮಿಸಿ ವೆಂಕಪಯ್ಯನನ್ನು ನೇಮಿಸಿದನು.

ನಂತರದಲ್ಲಿ ಮರಾಠರು ಈ ಕೋಟೆಯನ್ನು ವಶಪಡಿಸಿಕೊಂಡರು. ಆರು ವರ್ಷಗಳ ನಂತರ ಟಿಪ್ಪು ಮರಾಠರನ್ನು ಸೋಲಿಸಿ ದುರ್ಗವನ್ನು ವಶಪಡಿಸಿಕೊಂಡು ೧೭೬೬ ರಲ್ಲಿ ಈ ದುರ್ಗಕ್ಕೆ ಇದ್ದ ಪ್ರಸನ್ನಗಿರಿ ಎಂಬ ಹೆಸರನ್ನು ಬದಲಿಸಿ "ಚಂದ್ರಯದುರ್ಗ" ಎಂಬ ಹೆಸರಿಟ್ಟನು. ಅನಂತರದಲ್ಲಿ. ಇದು ಇಂದು ಚನ್ನರಾಯನದುರ್ಗವೆಂಬ ಹೆಸರು ಪಡೆದಿದೆ.

**ಹೊಳವನಹಳ್ಳಿ ಪಾಳೆಯ ಪಟ್ಟುಗಳು**

ಹೊಳವನಹಳ್ಳಿ ಪ್ರಾರಂಭದಲ್ಲಿ ಕೊರಮಪುರ ಎಂದು ಕರೆಯಲಾಗುತ್ತಿತ್ತು. ೧೫ ನೇ ಶತಮಾನದ ಅವತಿಯ ದಾಖಲೆಗಳು ದೊರೆತಿದ್ದು, ಹೊಳವನಹಳ್ಳಿಯ ಪಾಳೆಗಾರರ ಬಗ್ಗೆ ಮಾಹಿತಿ ನೀಡಿವೆ.[೪೬] ಇದರ ಪ್ರಕಾರ ಕಂಜಿಪುರದ ಸಮೀಪ ಯಣಮಂಜಿ ಪುತ್ತೂರು ಪ್ರಾಂತ್ಯದ ದೈವಭಕ್ತನಾಗಿ ಧರ್ಮನಿಷ್ಠನಾಗಿ ಜೀವಿಸುತ್ತಿದ್ದ ರಣ ಭೈರೇಗೌಡನನ್ನು ಅಲ್ಲಿನ ಜನರು ನಾಡಗೌಡನೆಂದು ಸಂಬೋಧಿಸುತ್ತಿದ್ದರು. ತನ್ನ ಸಹೋದರರು ೭ ಜನರಿದ್ದು ಪ್ರಾಂತ್ಯದ ಎಲ್ಲಾ ದಿಕ್ಕುಗಳಿಗೆ ಕಾವಲುಗಾರರಿಗೆ ಕರ್ತವ್ಯ ನಿರ್ವಹಿಸುತ್ತಿದ್ದರು.[೪೭]

ಈ ನಾಡು ಶಾಶ್ವತವಾಗಿರಬೇಕೆಂದು ರಣ ಬೈರೇಗೌಡನ ಹಿರಿಯ ಮಗನಾದ ಜಯಗೌಡನ ನೇತೃತ್ವದಲ್ಲಿ ಸಾಮ್ರಾಜ್ಯ ವಿಸ್ತರಿಸಲು ಪ್ರಯತ್ನಿಸಿದನು. ಜಯಗೌಡನ ಸಲಹೆಯಂತೆ ರಾಜ್ಯ ವಿಸ್ತರಣೆಯ ಹೊಣೆ ಹೊತ್ತು ಹೊರಟರು. ಜಯಮಂಗಲಿ ನದಿ ತೀರದಲ್ಲಿ ಹೊಳವನಗೌಡನ ಪರಿಚಯವಾಗಿ ಅವನ ಆತಿಥ್ಯವನ್ನು ಸ್ವೀಕರಿಸಿದರು. ಇದರಿಂದ ಸಂತೃಪ್ತನಾದ ಸಣ್ಣ ರಣಭೈರೇಗೌಡ ಕೆಲಕಾಲ ಅಲ್ಲಿಯೇ ತಂಗಿದ್ದು ಹೊಳವನಗೌಡನ ಶೌರ್ಯತನ ಗಮನಿಸಿದನು. ಸಣ್ಣರಣಭೈರೇಗೌಡ ಆ ಸಂಸ್ಥಾನದ ಒಡೆಯನಾಗಿ ಮುಂದುವರೆದನು. ಅಂದಿನ ಕೊರಮಪುರವೇ ಹೊಳವನಗೌಡನ ಆಳ್ವಿಕೆಯ ನಂತರ ಕಾಲ ಕ್ರಮೇಣ ಹೊಳವನಹಳ್ಳಿಯಾಗಿದೆ ಎಂದು ಇತಿಹಾಸ ತಜ್ಞರ ಅಭಿಪ್ರಾಯವಾಗಿದೆ. ಮಾಗಡಿಯ ಪಾಳೆಗಾರ ಹೊಳವನಹಳ್ಳಿಯನ್ನು ಮುತ್ತಿ ವಶಪಡಿಸಿಕೊಂಡಾಗ ಭೈರೇಗೌಡನ ಮಗ ಬೈಚೋಗೌಡ ಶಿರಾಕ್ಕೆ ಹೋಗಿ ಆಶ್ರಯ ಪಡೆದನು. ನಂತರ ದೊಡ್ಡಬಳ್ಳಾಪುರದ ಪಾಳೆಗಾರನ ಸಹಾಯ ಪಡೆದು ಹೊಳವನಹಳ್ಳಿಯನ್ನು ಗೆದ್ದು ಬೈಚೇಗೌಡ ಆಳ್ವಿಕೆ ಮಾಡಲು ಪ್ರಾರಂಭಿಸಿದನು.[೪೮] ಈತನು ದಕ್ಷತೆಯಿಂದ ಅನೇಕ ಪ್ರದೇಶಗಳನ್ನು ಗೆದ್ದುಕೊಂಡನು. ಹೊಳವನಹಳ್ಳಿ ಪಾಳೆಗಾರರು ಕೊರಟಗೆರೆಯಲ್ಲಿ ಕೋಟೆಯೊಂದನ್ನು ನಿರ್ಮಿಸಿ ಗುಂಡಕಲ್, ಇರಕಸಂದ್ರ, ಸಾಗ್ಗೆರೆ, ಕೋಳಾಲ, ದಾಸರಹಳ್ಳಿಗಳನ್ನು ತನ್ನ ಪಾಳೆಯ ಪಟ್ಟುಗಳಿಗೆ ಸೇರಿಸಿಕೊಂಡರು.[೪೯] ಇವರು ಮೈಸೂರು ಅರಸರಿಗೆ, ಮರಾಠರಿಗೆ, ಶಿರಾದ ನವಾಬರಿಗೆ ನಂತರದಲ್ಲಿ ಹೈದರಾಲಿಗೆ ಅದೀನರಾಗಿದ್ದರು. ಹೈದರನ ನಂತರ ಬಂದ ಟಿಪ್ಪು ಈ ವಂಶದ ಕೊನೆಯ ದೊರೆಯಾದ ರಾಮಬೈರೇಗೌಡನನ್ನು ಸೋಲಿಸಿ ಹೊಳವನಹಳ್ಳಿಯನ್ನು ವಶಪಡಿಸಿಕೊಂಡನು. ಈ ಪ್ರದೇಶವು ಮೈಸೂರಿನ ಅರಸರ ಆಳ್ವಿಕೆಯ ನಂತರ ಬ್ರಿಟೀಷರ ಮತ್ತು ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಲೀನವಾಗಿದೆ.

## ಅಡಿ ಟಿಪ್ಪಣಿ

೧. ಅಭಿಶಂಕರ್ ಕೆ., ೧೯೬೯ : ತುಮಕೂರು ಜಿಲ್ಲಾ ಗೆಜಿಟಿಯರ್ , ಪು. ೭೮

೨. ಲಕ್ಷ್ಮಣ್ ಸಿ.ಎಂ. ೨೦೦೦ : ತುಮಕೂರುಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ, ಪು.೪

೩. ಅದೇ ಪು. ೯

೪. ಅದೇ ಪು. ೬

೫. ಅದೇ ಪು. ೭

೬. ಭಾಸ್ಕರಪ್ಪ ಪಿ.ಎನ್. ೧೯೮೧: ತುಮಕೂರು ಜಿಲ್ಲಾದರ್ಶನ , ಪು. ೭೯

೭. ಅದೇ ಪು. ೯೪

೮. ಅದೇ ಪು. ೧೦೪

೯. ಕೃಷಿ ಇಲಾಖಾ ವರದಿ, ೨೦೦೫: ಕೃಷಿ ಇಲಾಖೆ, ಕರ್ನಾಟಕ ಸರ್ಕಾರ, ಪು.೧೮

೧೦. ಅರಣ್ಯ ಇಲಾಖಾ ವರದಿ,೨೦೦೮ : ಅರಣ್ಯಇಲಾಖೆ ಕರ್ನಾಟಕ ಸರ್ಕಾರ , ಪು.೪೩

೧೧. ಅದೇ ಪು.೪೫

೧೨. ಕಾಮತ್ ಎಸ್.ವಿ. (ಸಂ.) ೧೯೮೯: ಕರ್ನಾಟಕ ರಾಜ್ಯ ಗೆಜಿಟಿಯರ್ ಭಾಗ-೨ , ಪು. ೫೪೩

೧೩. ಗೋಪಾಲ್ ಆರ್, (ಸಂ.) ೨೦೦೯: ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೪೯೮

೧೪. ಭಾಸ್ಕರಪ್ಪ ಸಿ.ಎನ್. ೧೯೮೧: ಪೂರ್ವೋಕ್ತ, ಪು.೧೩೨

೧೫. ಗೋಪಾಲ್ ಆರ್, ೨೦೦೯: ಪೂರ್ವೋಕ್ತ , ಪು. ೬೩

೧೬. ಲಕ್ಷ್ಮಣ ಸಿ.ಎಂ. ೨೦೦೦: ಪೂರ್ವೋಕ್ತ , ಪು. ೫೧

೧೭. ಸುಂದರ.ಅ, ೧೯೮೧: ಕರ್ನಾಟಕ ಪ್ರಾಗಿತಿಹಾಸ, ಪು.೮೧

೧೮. ಶಿವತಾರ ಕೆ.ವಿ, ೧೯೯೯: ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳ ಒಂದು ಸಾಂಸ್ಕೃತಿಕ ಅಧ್ಯಯನ,ಪು. ೨

೧೯. ನಾಗರಾಜ್‌ರಾವ್ ಎಂ.ಎಸ್, ಅನ್ಸಾರಿಜೆಡ್,೧೯೭೦: ಎಕ್ಸವೇಷನ್ ಆಫ್ ಸಂಗನಕಲ್ಲು, ಪು. ೩

೨೦. ಶಿವತಾರ, ಕೆ.ಬಿ. ೧೯೯೯: ಪೂರ್ವೋಕ್ತ , ಪು. ೪೫೭

೨೧. ಅದೇ ಪು.ಸಂ. ೪೫೮

೨೨. ಶಿವತಾರ, ಕೆ.ಬಿ. ೨೦೦೧: ಕರ್ನಾಟಕದ ಪುರಾತತ್ವೀಯ ನೆಲೆಗಳು, ಪು ೨೭೧

೨೩.ಅದೇ ಪು. ೨೭೩

೨೪. ಅದೇ ಪು. ೨೭೧

೨೫. ಅದೇ ಪು. ೨೭೨

೨೬. ಅದೇ ಪು. ೨೭೩

೨೭. ನಾಗರಾಜರಾವ್ ಎಂ.ಎನ್. , ಅನ್ಸಾರಿ ಜೆಡ್, ೧೯೭೦: ಪೂರ್ವೋಕ್ತ , ಪು. ೪

೨೮. ಸುಂದರ.ಅ, ೧೯೮೧: ಪೂರ್ವೋಕ್ತ , ಪು. ೮೮

೨೩. ಶಿವತಾರ ಕೆ.ಬಿ. ೨೦೦೧: ಪೂರ್ವೋಕ್ತ, ಪು ೨೭೨

೨೪. ನರಸಿಂಹಮೂರ್ತಿ ಎಸ್.ಎಂ. ೨೦೦೪: ನೊಳಂಬ ಇತಿಹಾಸ ದರ್ಶನ, ಪು. ೪೯

೨೫. ಅದೇ ಪು. ೫೪

೨೬. EC.Vol XII 14, ಮಧುಗಿರಿ

೨೭. EC.Vol XII 27, ಗುಂಡ್ಲಳ್ಳಿ, ಪಾವಗಡ ತಾಲ್ಲೂಕು.

೨೮. ಷೇಕ್ ಅಲಿ .ಬಿ. ಸುಂದರ, ಅ, ೧೯೯೭: ಕರ್ನಾಟಕ ಚರಿತ್ರೆ , ಸಂ.೨ ಪು.೧೮೭

೨೯. ಗೋಪಾಲ್ ಆರ್, ೨೦೦೯: ಪೂರ್ವೋಕ್ತ, ಪು. ೫೧೭

೩೦. EC.Vol XII 83, ಮಧುಗಿರಿ

೩೧. ಸೂರ್ಯನಾಥ ಕಾಮತ್ , ೨೦೦೦: ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು. ೯೪

೩೨. ಗೋಪಾಲ ಆರ್. (ಸಂ), ೨೦೦೯: ಪೂರ್ವೋಕ್ತ, ಪು. ೯೬

೩೩.ಕಪನಿಪತಿ ಭಟ್ಟ, ೧೯೭೦: ಕರ್ನಾಟಕ ಪರಂಪರೆ, ಪೂರ್ವೋಕ್ತ , ಪು. ೪೯೮

೩೪. ಗೋಪಾಲ್ ಆರ್. ೨೦೦೯: ಪೂರ್ವೋಕ್ತ , ಪು. ೩೪೪

೩೫. EC.Vol XII 127, ಮಧುಗಿರಿ

೩೬. ಶಂಕರ ನಾರಾಯಣ ರಾವ್. ಎಂ.ಪಿ., ೧೯೭೨: ಆವತಿಯ ನಾಡಪ್ರಭುಗಳು, ಪು.೪೧

೩೭ ಕಲ್ಬುರ್ಗಿ ಎಂ.ಎಂ., ೧೯೯೫: ಮಹಾನಾಡ ಪ್ರಭುಗಳು, (ಲೇ) ಕಾವಲಮ್ಮ ಪು. ೨೫

೩೮. ವಸು. ಎಂ.ವಿ. ೨೦೦೧ : ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು. ೪೯

೩೯. ನಾಗಮಣಿ ಪದ್ಮನಾಭ, ೨೦೦೩: ಕೊರಟಗೆರೆ ತಾಲ್ಲೂಕು ದರ್ಶನ , ಪು.೩೦

೪೦. ಶರ್ಮ ತಿ.ತಾ., ೧೯೯೦: ಚಾರಿತ್ರಿಕ ದಾಖಲೆಗಳು , ಪು.೮೦

೪೧. ಅದೇ. ಪು. ೮೯

೪೨. ಅದೇ. ಪು. ೮೮

೪೩. ಅದೇ. ಪು. ೪೮

೪೪. ನಾಗಮಣಿ ಪದ್ಮನಾಭ, ೨೦೦೩: ಪೂರ್ವೋಕ್ತ , ಪು. ೧೦

೪೫. ಅದೇ. ಪು. ೫೦

೪೬. ಶಂಕರನಾರಾಯಣ ಎನ್.ಪಿ. ೧೯೭೭: ಪೂರ್ವೋಕ್ತ, ಪು. ೪೩

## ಅಧ್ಯಾಯ -ಮೂರು

## ಶಾಸನಗಳು

ಶಾಸನಗಳು ಗತಕಾಲದ ಸಂಸ್ಕೃತಿಯ ಚರಿತ್ರೆಯನ್ನು ತಿಳಿಸುವಲ್ಲಿ ಹಾಗು ನಿರ್ಮಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ವಸ್ತು ನಿಷ್ಠತೆಯ ಇತಿಹಾಸವನ್ನು ರಚಿಸಲು ಶಾಸನಗಳು ಪ್ರಮುಖ ಆಧಾರಗಳಾಗಿವೆ. ಸಾಹಿತ್ಯ, ಕಲಾಕೃತಿಗಳು , ನಾಣ್ಯಗಳು, ವಿದೇಶಿಯರ ವರದಿಗಳು, ಭೂ ಉತ್ಖನನದಿಂದ ಹೊರಬಿದ್ದ ಅಂಶಗಳು ಇವೆಲ್ಲವೂ ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಪರಂಪರೆಯನ್ನು ತಿಳಿಯಲು ಮುಖ್ಯ ಆಧಾರಗಳಾಗಿವೆ. ಇತರೆ ಆಧಾರಗಳು ತುಂಬಿಕೊಡಲಾಗದಂತಹ ಅಂಶಗಳನ್ನು ಶಾಸನ ಸಂಪತ್ತು ಒದಗಿಸಿಕೊಡುತ್ತದೆ.[೧] ಶಾಸನಗಳನ್ನು ಸಾಮಾನ್ಯವಾಗಿ ಶಿಲೆ ಮತ್ತು ಲೋಹದಂತಹ ಗಟ್ಟಿಯಾದ ವಸ್ತುವಿನ ಮೇಲೆ ರಚಿಸಲಾಗುತ್ತದೆ. ಶಾಸನ ಎಂಬ ಪದವು 'ಕಾನೂನು' ಎಂಬ ಅರ್ಥವನ್ನು ಪ್ರಚಲಿತ ಕಾಲದಲ್ಲಿ ನೀಡುತ್ತದೆ. ಆದರೆ ಪ್ರಾಚೀನ ಕಾಲದಲ್ಲಿ " ರಾಜನ ಆಜ್ಞೆಗೆ" ಸಂಬಂಧಿಸಿದಾಗಿತ್ತು. ರಾಜನೇ ಸರ್ವಾಧಿಕಾರಿಯಾಗಿ ಶಾಸನಗಳನ್ನು ಹೊರಡಿಸುತ್ತಿದ್ದನು. ಹೀಗೆ ರಾಜನು ಹೊರಡಿಸುತ್ತಿದ್ದ ಆಜ್ಞೆಗಳೇ ರಾಜಾಜ್ಞೆ ಎಂಬ ಅರ್ಥದಲ್ಲಿ ಉಳಿಯಿತೆಂದು ಹೇಳಬಹುದಾಗಿದೆ.[೨] ಶಾಸನ ಎಂಬ ಪದವು ಸಂಸ್ಕೃತದ 'ಶಾಸ್' ಎಂಬ ಧಾತುವಿನಿಂದ ಹುಟ್ಟಿದೆ. ಶಾಸ್ ಎಂದರೆ ಅಜ್ಞೆ ಮತ್ತು ಶಿಕ್ಷೆ ಎಂಬ ಅರ್ಥ ಕೊಡುತ್ತದೆ.

ಕೌಟಿಲ್ಯ ತನ್ನ ಕೃತಿಯಾದ ಅರ್ಥ ಶಾಸ್ತ್ರದಲ್ಲಿ ಶಾಸನದ ಬಗ್ಗೆ ಮಾತನಾಡುತ್ತಾ ರಾಜರ ಆಜ್ಞೆಗಳನ್ನು ತಿಳಿಸುವ ಬರಹವೇ ಶಾಸನ ಎಂದಿದ್ದಾನೆ. ಬ್ರಿಟಾನಿಕಾ ವಿಶ್ವಕೋಶದಲ್ಲಿ ಶಾಸನದ ವ್ಯಾಖ್ಯೆ ಹೀಗೆ ವಿವರಿಸಲಾಗಿದೆ. " ಕೆಲವು ಸೂಚನೆಗಳನ್ನು ನೀಡುವುದಕ್ಕಾಗಿ ಅಥವಾ ಕೆಲವು ದಾಖಲೆಗಳನ್ನು ದೀರ್ಘ ಕಾಲಾಂತರದವರೆಗವಿಗೂ ಸಂರಕ್ಷಿಸುವುದಕ್ಕಾಗಿ ತಾಳಗರಿ, ಭೂರ್ಜ ಪತ್ರ, ಮುಂತಾದವುಗಳ ಮೇಲೆ ಬರೆಯದೆ ಹಾಗೆ ಬಹುಕಾಲ ಬಾಳುವ ಗಟ್ಟಿಯಾದ ಸಾಮಗ್ರಿಯ ಮೇಲೆ ಕೆತ್ತಿದ ಬರಹಗಳೇ ಶಾಸನಗಳು ಎಂದು ತಿಳಿಸಲಾಗಿದೆ.[೩] ಇಂತಹ ಗಟ್ಟಿ ಸಾಮಗ್ರಿಗಳಲ್ಲಿ ಶಿಲಾಶಾಸನ ತಾಮ್ರ ಶಾಸನಗಳು ಪ್ರಮುಖವಾದವುಗಳಾಗಿವೆ. ಇವುಗಳ ಜೊತೆಗೆ ವೀರಗಲ್ಲು ಶಾಸನ, ಮಾಸ್ತಿಕಲ್ಲು ಶಾಸನ, ನಿಷಧಿ ಕಲ್ಲುಗಳು ಇವೆಲ್ಲವೂ ಮೂಲಾರ್ಥದಲ್ಲಿ ಶಾಸನಗಳಾಗಿವೆ.[೪] ಇವುಗಳಲ್ಲಿ ಹೆಚ್ಚಿನವು ದಾನ ದತ್ತಿಗೆ ಸಂಬಂಧಿಸಿದ ಶಾಸನಗಳಾಗಿವೆ. ಪ್ರಾಚೀನ ಸಮಾಜದಲ್ಲಿ 'ದಾನ' ಮಹೋನ್ನತವಾದ ಮೌಲ್ಯವಾಗಿತ್ತು. ಅಂದಿನ ಸಮಾಜದಲ್ಲಿ ಹದಿನಾರು ಪ್ರಕಾರದ ದಾನಗಳು ಪ್ರಚಲಿತದಲ್ಲಿದ್ದವು. ಕನ್ನಡ ನಾಡಿನ ದಾನ ಚಿಂತಾಮಣಿ ಅತ್ತಿಮಬ್ಬೆಯೆಂಬ ಹೆಸರು ಚಿರವಾಗಿ ಉಳಿಯಲು ಅವಳ ದಾನ, ಗುಣದಿಂದಲೇ ತಿಳಿಯುತ್ತದೆ ದಾನವನ್ನು

ಸಾಮಾನ್ಯವಾಗಿ ಮಠ, ಬಸದಿ, ದೇವಾಲಯ, ವಿದ್ಯಾಕೇಂದ್ರ ಕೆರೆ, ಅರವಟ್ಟಿಗೆ, ಪಂಡಿತರಿಗೆ ನೀಡಲಾಗುತ್ತಿತ್ತು. ಅಂದು ರಾಜ್ಯವಾಳುತ್ತಿದ್ದ ಅರಸ, ಮಾಂಡಳಿಕ, ಪ್ರಧಾನ ಗೌಡ, ಹೀಗೆ ಕೇಂದ್ರದಿಂದ ಮೊದಲೊಂಡು ಚಿಕ್ಕ ಘಟಕವಾದ ಗ್ರಾಮದವರೆಗೂ ದಾನದ ಬಗ್ಗೆ ಮಾಹಿತಿ ದೊರೆಯುತ್ತದೆ.[೫] ದಾನ ಧರ್ಮಗಳು ಶಾಸನಗಳ ಪ್ರೇರಕ ಶಕ್ತಿಯಾಗಿದ್ದರಿಂದಲೇ ದಾನ ಶಾಸನಗಳ ಸಂಖ್ಯೆಯು ಹೆಚ್ಚಿದೆ.) ಪ್ರಸ್ತುತ ಅಧ್ಯಯನದಲ್ಲಿ ತುಮಕೂರು ಜಿಲ್ಲೆ ಮೊದಲಿಗೆ ಒಟ್ಟು ೮ ತಾಲ್ಲೂಕುಗಳನ್ನು ಒಳಗೊಂಡಿತು. ಅವು ಯಾವುವೆಂದರೆ ತುಮಕೂರು ಗುಬ್ಬಿ , ಕುಣಿಗಲ್, ತಿಪಟೂರು ಚಿಕ್ಕ ನಾಯಕನಹಳ್ಳಿ , ಸಿರಾ ಮಧುಗಿರಿ ಮತ್ತು ಪಾವಗಡ ಇತ್ತೀಚೆಗೆ ತುರುವೇಕೆರೆ ಮತ್ತು ಕೊರಟಗೆರೆ ತಾಲ್ಲೂಕುಗಳು ರಚನೆಯಾಗಿವೆ. ಇವು ಹಿಂದೆ ಕ್ರಮವಾಗಿ ತಿಪಟೂರು ಮತ್ತು ಮಧುಗಿರಿ ತಾಲ್ಲೂಕುಗಳಾಗಿ ಭಾಗವಾಗಿದ್ದವು.[೬] (ತುಮಕೂರು ಜಿಲ್ಲೆಯ ಪ್ರಕಟಿತ ಶಾಸನಗಳು ಸಮಗ್ರವಾಗಿ ಒಂದು ಸಂಪುಟದಲ್ಲಿಲ್ಲ. ಎಪಿಗ್ರಾಫಿಯಾ ಕರ್ನಾಟಕ ಸಂಪುಟ ೧೨ ರಲ್ಲಿ ಹಲವು ಶಾಸನಗಳನ್ನು ಪ್ರಕಟಿಸಲಾಯಿತು. ಅನಂತರ ಕಾಲದಿಂದ ಕಾಲಕ್ಕೆ ದೊರೆತ ಶಾಸನಗಳು ಎಂ.ಎ. ಆರ್.ವಾರ್ಷಿಕ ವರದಿಗಳಲ್ಲಿ ಪ್ರಕಟಿಸಲಾಗಿದೆ.[೭] ಇವುಗಳೆಲ್ಲವನ್ನು ಒಂದುಗೂಡಿಸಿ ಎಪಿಗ್ರಾಫಿಯಾ ಕರ್ನಾಟಕ ಸಂಪುಟ ೧೬ ತುಮಕೂರುಜಿಲ್ಲೆಯ ಸಪ್ಲಿಮೆಂಟ್ ಎಂದು ೧೯೫೫ ರಲ್ಲಿ ಪ್ರಕಟಿಸಲಾಗಿದೆ. ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಸುಮಾರು ೯೩೦ ಶಾಸನಗಳು ದೊರೆತಿವೆ.[೮] ಅದೇ ರೀತಿ ಹಿಂದೆ ಮಧುಗಿರಿ ತಾಲ್ಲೂಕಿನ ಪ್ಯಾಪ್ತಿಯಲ್ಲಿ ಸೇರಿದ ಕೊರಟಗೆರೆಯು ಒಳಗೊಂಡಂತೆ ೧೩೮ ಶಾಸನಗಳು ಕಂಡು ಬಂದಿವೆ. ಈ ಶಾಸನಗಳು ಗಂಗ, ಚೋಳ, ವಿಜಯನಗರ, ಮೈಸೂರು, ಮರಾಠ, ನಿಡುಗಲ್ಲು ಹೊಳವನಹಳ್ಳಿ ಅರಸು ಮನೆತನಗಳಿಗೆ ಸೇರಿದವುಗಳಾಗಿವೆ.[೯] ಇವುಗಳ ಆಧಾರದ ಮೇಲೆ ಅಂದಿನ ಸಾಮಾಜಿಕ ಆರ್ಥಿಕ ಧಾರ್ಮಿಕ, ರಾಜಕೀಯ ವಿಚಾರಗಳನ್ನು ತಿಳಿಯಬಹುದು. ಅಂದಿನ ಶಾಸನಗಳನ್ನು ಅಧ್ಯಯನದ ದೃಷ್ಟಿಯಿಂದ ೫ ಭಾಗಗಳಾಗಿ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ

1) ಶಿಲಾ ಶಾಸನಗಳು

2) ತಾಮ್ರ ಶಾಸನಗಳು

3) ತಾಳ ಪತ್ರ.

4) ವೀರಗಲ್ಲುಗಳು

5) ಮಾಸ್ತಿಕಲ್ಲುಗಳು

## ೩.೧ ಶಿಲಾ ಶಾಸನಗಳು

ಬರಹವನ್ನು ಚಿರವಾಗಿರಿಸಲು ಶಿಲೆಯ ಮೇಲೆ ಕೆತ್ತಿಸುವ ಸಂಪ್ರದಾಯ ಪೂರ್ವದಿಂದಲೂ ಬಂದಿದೆ. ಈ ಶಾಸನಗಳನ್ನು ಬಂಡೆ, ಸ್ತಂಭ, ಪಾತ್ರೆ, ಸ್ತೂಪಗಳ ಹೊರಭಾಗ, ಗುಹೆ, ಪ್ರತಿಮೆಗಳ ಮೇಲೆ ಕೆತ್ತಿದ ಎಲ್ಲಾ ಬರಹವನ್ನು ಶಿಲಾ ಶಾಸನಗಳೆಂದೆ ಕರೆಯಬಹುದು. ಬಂಡೆ ಮೇಲಿನ ಶಾಸನಗಳು ಹೆಚ್ಚು ಪ್ರಸಿದ್ಧವಾದದ್ದು ಅಶೋಕನ ಕಾಲದಲ್ಲಿ ಇವನ ಶಾಸನಗಳು ಕರ್ನಾಟಕದಲ್ಲಿ ಬ್ರಹ್ಮಗಿರಿ , ಸಿದ್ದಾಪುರ, ಜಂಟಿಗ ರಾಮೇಶ್ವರ , ಕೊಪ್ಪಳ, ಮಸ್ಕಿಗಳಲ್ಲಿ ಕಂಡು ಬಂದಿವೆ.[೧೦] ಶಿಲಾ ಶಾಸನಗಳ ರಚನಾ ಕ್ರಮದಲ್ಲಿ ಒಂದು ನಿರ್ದಿಷ್ಟ ಸ್ವರೂಪವನ್ನು ಅಳವಡಿಸಿಕೊಂಡಿರುವುದು ತಿಳಿದು ಬರುತ್ತದೆ. ಸ್ಥೂಲವಾಗಿ ಎಲ್ಲಾ ಶಾಸನಗಳು ಈ ಮುಂದಿನ ಕ್ರಮವನ್ನು ಅನುಸರಿಸುತ್ತವೆ. ಅದೇನೆಂದರೆ ೧. ಮಂಗಳ ಶ್ಲೋಕ, ೨. ಶಾಸನದ ದಾತೃಗಳಾದ ರಾಜ,ಮಂಡಳಿಕ, ಅಧಿಕಾರಿಯ ವಂಶಾವಳಿ, ೩. ದಾನ ಮಾಡಿದ ಕಾಲ ೪. ಶಾಸನದ ವಿಷಯ ಶಾಸನ ಉದ್ದೇಶದ ವಿವರ ೫ ಉಪಸಂಹಾರ ೬. ಶಾಸನ ಕೊರೆದವರ ಉಲ್ಲೇಖ ೭. ಸಾಕ್ಷಿದಾರರ ಮಾಹಿತಿ ೮. ರಾಜನ ಒಪ್ಪಿಗೆ ಕುರಿತ ಹಸ್ತಕ್ಷರದ ರುಜುವಾತು. ಈ ರೀತಿ ಎಲ್ಲಾ ಶಾಸನಗಳು ಇರುತ್ತದೆಂದು ಹೇಳಲಾಗುವುದಿಲ್ಲ. ಕೆಲವು ಶಾಸನಗಳಲ್ಲಿ ಕಂಡು ಬರುವುದಿಲ್ಲ. ಕೆಲವೊಮ್ಮೆ ಗ್ರಾಮದ ಹಿರಿಯರು ಮಹಾಜನರ, ದೇವರ ಸಮುಖದಲ್ಲಿ ಕಂಡುಬರುವುದಿಲ್ಲ . ಕೆಲವೊಮ್ಮೆ ಗ್ರಾಮದ ಹಿರಿಯರು. ಮಹಾಜನರ ದೇವರ ಸಮ್ಮುಖದಲ್ಲಿ ಎಂಬ ಉಲ್ಲೇಖಗಳು ಕಾಣಸಿಗುತ್ತವೆ.[೧೧] ಈ ಎಲ್ಲಾ ಮಾಹಿತಿಗಳಿಂದ ಇತಿಹಾಸ ನಿರ್ಮಿಸಲು ಸಾಧ್ಯವಾಗುತ್ತದೆ.

ಚನ್ನರಾಯನ ದುರ್ಗ ಪರಿಸರದ ಚರಿತ್ರೆಯನ್ನು ಬಿಂಬಿಸುವ ಹಲವು ಶಾಸನಗಳು ಸ್ಥಳೀಯವಾಗಿ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ಲಭ್ಯವಾಗಿವೆ. ಈ ಪ್ರದೇಶದಲ್ಲಿ ದೊರೆತ ಶಾಸನಗಳಲ್ಲಿ ಕನ್ನಡ , ಸಂಸ್ಕೃತ, ಮರಾಠಿ, ಭಾಷೆಯ ಶಾಸನಗಳು ಕಂಡು ಬಂದಿವೆ. ಶಾಸನಗಳ ಲಿಪಿಯು ಕನ್ನಡ ಮತ್ತು ಮರಾಠಿಯಲ್ಲಿ ಇರುವುದನ್ನು ಕಾಣಬಹುದಾಗಿದೆ. ಅಂತಹ ಶಾಸನಗಳನ್ನು ಈ ಕೆಳಕಂಡಂತೆ ತಿಳಿಯೋಣ.

ಕೊರಟಗೆರೆಯ ಕೋಟೆ ವೆಂಕಟರಮಣ ದೇವಾಲಯದ ಮುಂಭಾಗದಲ್ಲಿರುವ ಪುಷ್ಕಣಿಯ ಬಲಭಾಗದಲ್ಲಿ, ಕಲ್ಲಿನಿಂದ ಕೆತ್ತಿದ ಶಾಸನವನ್ನು ಕಾಣಬಹುದು. ಈ ಶಾಸನವು ೧೯೫೬ ರಲ್ಲಿ ಆಳ್ವಿಕೆ ನಡೆಸುತ್ತಿದ್ದ ಹೊಳವನಹಳ್ಳಿಯ ದೊಡ್ಡ ರಣಭೈರೇಗೌಡನು ದೇವಾಲಯಕ್ಕೆ ಮಾಡಿದ ಜೀರ್ಣೋದ್ಧಾರ ಹಾಗು ಸೇವೆಯನ್ನು ತಿಳಿಸುತ್ತದೆ. ಅಲ್ಲದೆ ಐದಾಯಿ ಪಂಚಾಳದವರಿಂದ ಕಾರ್ತಿಕ ದೀಪಾರಾಧನೆಗೆ ದುರ್ಗಾ ಮಹಾಕಾಳಿ ದೇವಿಗೆ ವರ್ತನೆಯಾಗಿ ಹೊನ್ನು ನೀಡಿದ ಸಂಗತಿಗಳಿವೆ.[೧೨] ಇದು ರಣ ಭೈರೇಗೌಡನ ವಂಶಾವಳಿ ಹಾಗು ವರ್ಣ ವ್ಯವಸ್ಥೆಯ ಕೊನೆಯ ವರ್ಗವನ್ನು ಗೌರವದಿಂದ ಗೂತ್ರ ಸೂಚನೆ ಮಾಹಿ

ಕಾಣುವ ಪ್ರಯತ್ನ ಗೋಚರಕ್ಕೆ ಬರುತ್ತದೆ.[೧೩] ಈ ಶಾಸನದಲ್ಲಿ ಭಾನುವಾರ ಶ್ರೀ ಮುಮ್ಮಡಿ ರಣ ಭೈರೇಗೌಡ ಎಂದು ಖಂಡರಿಸಲಾಗಿದೆ. ಇದರಿಂದ ತಿಳಿದ ಅಂಶವೆಂದರೆ ಇದರ ಜೀರ್ಣೋದ್ಧಾರವು ಭಾನುವಾರದಂದು ಮಾಡಲಾಗಿದೆ ಎಂದು ತಿಳಿಯಬಹುದಾಗಿದೆ. ಪ್ರಸ್ತುತವಾಗಿ ಈ ಶಾಸನಕ್ಕೆ ಯಾವುದೇ ರಕ್ಷಣೆ ಇಲ್ಲದೆ ಈ ಶಾಸನದ ಮೊದಲಭಾಗವು ತುಂಡಾಗಿದ್ದು ಎರಡನೇ ಭಾಗಮಾತ್ರ ಇಂದು ಕಾಣಬಹುದಾಗಿದೆ.

ಕ್ರಿ.ಶ. ೧೫೦೨ ರಚನೆಯಾದ ವೀರಗಲ್ಲು ಶಾಸನವು ಕೊರಟಗೆರೆಯ ರಾಂಪುರ ಗ್ರಾಮದಲ್ಲಿದೆ. ಇದು ಸಿಯಗೆಲ್ಲ ಅರಸುವಂಶದ ಆಳ್ವಿಕೆ ಮತ್ತು ಗಂಗರ ದುರ್ವಿನೀತನ ತಮ್ಮ ಬೂತುಗನ ಕಾಳಗದ ಪ್ರಸ್ತಾಪ ಹಾಗು ಗ್ರಾಮದ ವೀರನೊಬ್ಬ ಬೂತುಗನ ಆನೆಯ ಮುಂದೆ ಕಾದು ವೀರ ಮರಣವನ್ನು ಅಪ್ಪಿದ್ದನ್ನು ಹೇಳಲಾಗಿದೆ. ಬಹುಶಃ ಸಿಯಗೆಲ್ಲ ಅರಸು ನೊಳಂಬರ ಪರವಾಗಿದ್ದು ಗಂಗರೆದುರು ಕಾಳಗ ಮಾಡಿದ್ದರೆಂದು ತೋರುತ್ತದೆ.[೧೪]

ಕ್ರಿ.ಶ. ೯೦೦ ರ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬೇಗೂರು ಎಂಬ ಗ್ರಾಮದ ವೀರಗಲ್ಲು ಶಾಸನ ಗಂಗ ಎರಯಪ್ಪನ ವೀರ ನಾಗತ್ತರ, ನೊಳಂಬ ಅಯ್ಯಪ್ಪದೇವನ ನಡುವಣ ತುಂಬೇವಾಡಿ ಕಾಳದ ಚಿತ್ರವನ್ನೇ ಪ್ರತಿ ಧ್ವನಿಸುವಂತಿದೆ. ಅಂದರೆ ಗಂಗ ನೊಳಂಬರ ನಡುವಣ ಯುದ್ಧ ಮುಂದುವರೆದಿತ್ತು ಎಂಬ ಸೂಚನೆ ಇದಾಗಿದೆ. ಅಣ್ಣಿಗನೇ ಅಯ್ಯಪ್ಪದೇವನಾಗಿದ್ದು, ನಾಗತ್ತರ ನೊಳಂಬ ಅರಸನ ಆನೆಯನಿರಿದು ಕಾದು ವೀರಸ್ವರ್ಗ ಸೇರಿಕಾಲ್ನಾಡು ಪಡೆದಂತೆ ತದ್ರೂಪ ಬೇಣಾಯ್ಯ ಗಂಗರ ಆನೆಯ ಕುಂಭ ಸ್ಥಳವೇರಿ ಕಾದು ಮಡಿದು ಕಲ್ನಾಡು ಪಡೆದಿದ್ದಾನೆಂದು ತಿಳಿಸಲಾಗಿದೆ.[೧೫]

ಹಾಗೆಯೇ ಕ್ರಿ.ಶ. ೯೬೦ ರ ತುಂಬಾಡಿ ಕೆರೆಕೋಡಿ ವೀರಗಲ್ಲು ಶಾಸನವು ಬಿದಿನೂರಿನಲ್ಲಿ ಬೂತುಗನೆದುರು ತುಮ್ಮೆಪಾದಿಯ ಗಡ್ಡಯ್ಯನ ಮಗ ಶಾದು ವೀರ ಸ್ವರ್ಗವನ್ನೇರಿದ ಸಂಗತಿಯನ್ನು ತಿಳಿಸುತ್ತದೆ. ಈ ಶಾಸನವು ಇಂದಿಗೂ ಸಹ ಆಂಜನೇಯ ದೇವಾಲಯದ ಎದುರಿನಲ್ಲಿ ಇರುವುದು ಕಂಡು ಬರುತ್ತದೆ.[೧೬] ಈಗಿನ ತುಂಬಾಡಿಯ ಹೆಸರು ಅಂದು ತುಮ್ಬೆಪಾದಿ ಎಂದಿತ್ತು. ಈ ಗ್ರಾಮವು ಪ್ರಾಚೀನ ಐತಿಹಾಸಿಕ ಗ್ರಾಮ ಎಂದು ತಿಳಿದು ಬರುತ್ತದೆ.

ಕ್ರಿ.ಶ. ೧೫೭೭ ಕ್ಕೆ ಸೇರಿದ ಕೊರಟಗೆರೆ ಹೋಬಳಿಯ ಚೀಲಗೊಂಡನಹಳ್ಳಿಯ ಮಲ್ಲಿಕಾರ್ಜುನ ದೇವಾಲಯದಲ್ಲಿ ದೊರೆತಿರುವ ಶಾಸನವು ರಾಜ ಶ್ರೀರಂಗರಾಯನಿಗೆ ಸೇರಿದ ದಾನ ಶಾಸನವಾಗಿದೆ. ಇದನ್ನು ಬರೆದವರು ರಾಮಿ ನಾಯಕನ ಹಳ್ಳಿಯ ಪನನೊಡೆಯರ ಮಗ ಕೆಂಪಯ್ಯ.[೧೭] ಈ ಶಾಸನವು ಸಂಸ್ಕೃತವಾಗಿದ್ದು ಲಿಪಿ ಕನ್ನಡದಲ್ಲಿದೆ. ಈ ಶಾಸನದಿಂದ ತಿಳಿದು ಬರುವ ಅಂಶವೆಂದರೆ ವಿಜಯನಗರ ಆಳ್ವಿಕೆಗೆ ಈ ಗ್ರಾಮ ಸಹ ಒಳಗೊಂಡಿತ್ತು. ಎಂಬ ಅಂಶ ತಿಳಿದು ಬರುತ್ತದೆ. ಈ ಗ್ರಾಮಕ್ಕೆ ಶ್ರೀರಂಗರಾಯನ ಕೊಡುಗೆ ಇದೆ ಎಂಬುದು ತಿಳಿಯಬಹುದಾಗಿದೆ.

ಚನ್ನರಾಯನದುರ್ಗ ಪರಿಸರದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖ ಶಾಸನವೆಂದರೆ ಚನ್ನ ರಾಯನದ ದುರ್ಗ ಕೋಟೆಯ ಪಶ್ಚಿಮ ಬಾಗಿಲಿನ ಗೋಡೆಯ ಮೇಲೆ ಕೆತ್ತಿಸಿದ ಮರಾಠಿ ಶಾಸನ, ಈ ಶಾಸನವು ೧೭೬೬ ರಲ್ಲಿ ಕೆತ್ತಲಾಗಿದೆ.[೧೮] ಈ ದುರ್ಗವು ಇದಕ್ಕೂ ಮೊದಲು ಮೈಸೂರಿನ ದೊಡ್ಡರಸು ಎಂಬುವವನನ್ನು ದುರ್ಗದ ನಾಯಕನಾಗಿ ನೇಮಿಸಲ್ಪಟ್ಟರು. ಆತನು ದುರ್ಗದ ಹೆಸರನ್ನು ಪ್ರಸನ್ನಗಿರಿ ಎಂದು ಬದಲಾಯಿಸಿದನು. ನಂತರದಲ್ಲಿ ಹೈದರಾಲಿಯ ವಶವಾಯಿತು. ಹೈದರನಿಂದ ಮರಾಠರ ಮಾದವರಾಯ ಈ ದುರ್ಗವನ್ನು ವಶಪಡಿಸಿಕೊಂಡು ಕೋಟೆ ಗೋಡೆಯ ಮೇಲೆ ನಾಲ್ಕು ಸಾಲಿನ ಮರಾಠಿ ಲಿಪಿಯ ಶಾಸನವನ್ನು ಕೆತ್ತಿಸಿದನು. ಈ ಶಾಸನದಲ್ಲಿ ಮರಾಠಿ ದಳಾಯಿಗಳಾದ ಗಣೇಶ ನಾರಾಯಣ, ಶ್ರೀ ಪಂತ ಪ್ರಧಾನ ಮತ್ತು ಮಾದವರಾವ್ ಬಲ್ಲಾಳ್ ಪ್ರಧಾನರು ಕೆತ್ತಿಸಿದ ಶಾಸನವಾಗಿದೆ.[೧೯] ಇವರು ವಶಪಡಿಸಿಕೊಂಡ ಈ ದುರ್ಗಕ್ಕೆ ಚಂದ್ರಾಯನ ದುರ್ಗ ಎಂದು ಶಾಸನದಲ್ಲಿ ಕೆತ್ತಲಾಗಿದೆ.

ಇದೇ ಪರಿಸರದ ಗ್ರಾಮವಾದ ನೇಗಲಾಲದಲ್ಲಿ ಕಾವಾಲಮ್ಮ ದೇವಾಲಯದ ಎದುರಿಗೆ ಪಾಳೆಗಾರರ ಕಾಲದಲ್ಲಿ ನಿರ್ಮಿಸಿರುವ ತೂಗುಯ್ಯಾಲೆ ಕಂಬದಲ್ಲಿ ಶಾಸನವಿದೆ. ಇದು ಕನ್ನಡ ಲಿಪಿಯಲ್ಲಿ ನೇ.. .. ದಾ.. ಮರೋಸನಪ ಎಂದು ಕೆತ್ತಲಾಗಿದೆ. ಬಹುಷಃ ಇದು ಉಯ್ಯಾಲೆ ಮಂಟಪವನ್ನು ನಿರ್ಮಿಸಿದ ವ್ಯಕ್ತಿಯ ಹೆಸರು ಇರಬಹುದಾಗಿದೆ.ಇದರ ರಚನೆಯ ಶೈಲಿಯನ್ನು ತಿಳಿಯುವುದಾದರೆ ೧೩ ನೇ ಶತಮಾನಕ್ಕೆ ಸೇರಿದ್ದು ಪಾಳೆಯಗಾರರ ಕಾಲದಲ್ಲಿ ನಿರ್ಮಿಸಲಾಗಿದೆ.

ಅದೇ ರೀತಿಯಲ್ಲಿ ಬಂಡೇಹಳ್ಳಿ ಗ್ರಾಮದಲ್ಲಿರುವ ಗಂಗಾಧರೇಶ್ವರ ಗವಿಯ ವಾಯುವ್ಯ ಭಾಗಕ್ಕೆ ೧೭೩೩ ರಲ್ಲಿ ರಚಿಸಿರುವ ೮ ನೇ ಸಾಲಿನ ಶಿಲಾ ಶಾಸನವನ್ನು ಸ್ವಾಭಾವಿಕ ಬಂಡೆಯ ಮೇಲೆ ಕೆತ್ತಲಾಗಿದೆ. ಶಾಸನವು "ಸ್ವಸ್ತಿಶ್ರೀ ಪರಿದಾವಿ ಸಂವತ್ಸರದ ೧೭೩೩ ಶಕ ವರ್ಷಂಗಳ್" ಎಂಬ ವಾಕ್ಯದಿಂದ ಪ್ರಾರಂಭವಾಗುತ್ತದೆ. ಈ ಶಾಸನದ ಬಗ್ಗೆ ಗಂಭೀರ ಅಧ್ಯಯನಗಳು ನಡೆಯಬೇಕಾಗಿವೆ. ಇದರ ಪಕ್ಕದಲ್ಲಿ ನೂತನ ಶಿಲಾಯುಗದ ಕಲ್ಲಾಸರೆಯ ಗವಿಯನ್ನು ಕಾಣಬಹುದಾಗಿದೆ.

### ೩.೨ ತಾಮ್ರ ಶಾಸನ

ಪ್ರಾಚೀನ ಕಾಲದಲ್ಲಿ ಶಾಸನಗಳಿಗೆ ಸಂಬಂಧಿಸಿದಂತೆ ತಾಮ್ರ ಅತ್ಯಂತ ಜನಪ್ರಿಯವಾದ ಲೋಹ ಸಾಮಗ್ರಿಯಾಗಿತ್ತು. ಶಾಸನಗಳ ರಚನೆಯಲ್ಲಿ ತಾಮ್ರವಲ್ಲದೆ ಇತರೆ ಲೋಹಗಳಾದ ಕಂಚು, ಬೆಳ್ಳಿ, ಚಿನ್ನ ಕಬ್ಬಿಣಗಳನ್ನು ಬಳಸುತ್ತಿದ್ದು, ಆದರೆ ಇವುಗಳು ಸಂಖ್ಯೆ ವಿರಳವಾಗಿತ್ತು.[೨೦] ಲೋಹ ಶಾಸನಗಳಲ್ಲಿ ಬಹುಪಾಲು ತಾಮ್ರ ಶಾಸನಗಳೇ ಹೆಚ್ಚಾಗಿದ್ದವು. ಆಕಾರದಲ್ಲಿ ೨ ೧/೨ x ೧ ೭/೮ ಅಂಗುಲದಿಂದ ಹಿಡಿದು ೨ ಅಡಿ ೬ ಅಂಗುಲದವರೆಗೆ ವಿಸ್ತಾರಗೊಂಡಿರುತ್ತಿದ್ದವು. ದಾನ ಶಾಸನಗಳನ್ನೊಳಗೊಂಡ ತಾಮ್ರ ಪಟಗಳು ಆಕಾರದಲ್ಲಿ ಮತ್ತು ವಿಷಯ ವೈವಿದ್ಯತೆಯಲ್ಲಿ ವಿವಿಧತೆ ಕಾಣಬಹುದಾಗಿದೆ.

ತಾಮ್ರ ಪಟಗಳ ಆಕಾರ ಮುಖ್ಯವಾಗಿ ಕರಡು ಪ್ರತಿಗಳ ಆಕರವನ್ನು ಅವಲಂಬಿಸಿರುತ್ತಿತ್ತು. ಕರಡು ಪ್ರತಿಗಳು ತಾಳ ಪತ್ರಗಳ ಮೇಲಿದ್ದಾಗ, ತಾಮ್ರ ಪಟಗಳು ಕಿರಿದಾದ ಉದ್ದ ಹೊಂದಿರುತ್ತಿದ್ದವು. ಕರಡು ಪ್ರತಿ ಭೂರ್ಜ ಪತ್ರಗಳ ಮೇಲಿದ್ದಾಗ ಪಟಗಳು ಅಗಲವಾಗಿದ್ದು ಹೆಚ್ಚು ಕಡಿಮೆ ಚಚೌಕವಾಗಿರುತ್ತಿದ್ದವು. ಪ್ರಶಸ್ತಿಯ ಅಂಶ ಹೆಚ್ಚಿದಷ್ಟು ತಾಮ್ರ ಪಟಗಳ ಆಕಾರ ವಿಸ್ತಾರವಾಗುತ್ತಾ ಹೋಗುತ್ತಿತ್ತು.[೨೧] ಪ್ರಸ್ತುತ ಅಧ್ಯಯನದ ಪ್ರದೇಶವಾದ ಚನ್ನರಾಯನದುರ್ಗ ಪರಿಸರದಲ್ಲಿಯೂ ಇಂತಹ ತಾಮ್ರ ಶಾಸನವು ದೊರೆತಿದ್ದು ಈ ಶಾಸನವು ವಿಜಯನಗರದ ಕಾಲಕ್ಕೆ ಸಂಬಂಧಿಸಿದ್ದಾದರೂ ಕೂಟ ಶಾಸನವೆಂದು ಗುರ್ತಿಸಲಾಗಿದೆ.[೨೨] ಇಂತಹ ತಾಮ್ರ ಶಾಸನದ ವಿವರವನ್ನು ಈ ಕೆಳಕಂಡಂತೆ ತಿಳಿಯೋಣ .

ಪ್ರಸ್ತುತಶಾಸನವು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಚನ್ನರಾಯನದುರ್ಗ ಗ್ರಾಮದ ಹರಿಯಪ್ಪ ಗೌಡರ ಪುತ್ರ ಸಂಜೀವಗೌಡ ಅವರ ಮನೆಯಲ್ಲಿದ್ದ ಶಾಸನವನ್ನು ಕೆ. ನಂಜುಂಡ ಪ್ರಸಾದ್ ಹಾಗು ಡಾ. ಎಂ. ಜಿ.ಮಂಜುನಾಥ ಎಂಬುವರು ಪ್ರಕಟಿಸಿ ಬೆಳಕಿಗೆ ತಂದಿದ್ದಾರೆ. ಈ ಶಾಸನವು ಕೂಟ ಶಾಸನವು ೩೦ ಸಾಲುಗಳಿಂದ ಕೂಡಿದ್ದು ೧೮ ಸೆಂ.ಮೀ. ಅಗಲ ಹಾಗು ೪೬ ಸೆಂ.ಮೀ. ಉದ್ದವಾಗಿದ್ದು ತೆಲುಗು ಭಾಷೆಯನ್ನು ಒಳಗೊಂಡಿದೆ. ವಿಜಯನಗರದ ಅರಸರ ಕುಲಕ್ಕೆ ಸೇರಿದ ಯದು ವಂಶದ ದುಮ್ಮಿ ದೊಡ್ಡ ನಾಯಕ ಹಾಗು ತಿಮ್ಮನಾಯಕ ಎಂಬ ವೀರರು ಹುಲಿಯನ್ನು ಕೊಂದು ಪಂಚ ಕಲ್ಯಾಣಿ ಕುದುರೆಯನ್ನೇರಿ ಸವಾರಿ ಮಾಡಿದ್ದು , ಹಾಗು ಅವರ ಪರಾಕ್ರಮವನ್ನು ಮೆಚ್ಚಿಕೊಂಡ ಮಹಾರಾಜರು ಬಿರುದು ಬಾವಲಿ ನೀಡಿ ಐದು ಗ್ರಾಮಗಳನ್ನು ಜಹಗೀರಾಗಿ ನೀಡಿ ಈ ವೀರರ ವಂಶದವರಿಗೆ ಇನ್ನು ಮುಂದೆ ಅಳ್ಳಿಕಾರ ಕುಲ ಎಂಬ ಪ್ರತ್ಯೇಕ ನಾಮ ಬರಲಿ ಎಂದು ಅರಸರು ಶಾಸನ ಬರೆಸಿಕೊಟ್ಟರೆಂದು ಈ ಶಾಸನ ದಾಖಲಿಸಿದೆ.

ಶಾಸನದ ಕಾಲದ ಬಗ್ಗೆ ಉಲ್ಲೇಖಿಸುವಾಗ ಶಾಲಿವಾಹನ ಶಕ ೧೪೪೯ ಪ್ಲವ ಸಂವತ್ಸರದ ಕಾರ್ತಿಕ ಶುದ್ಧ ಆದಿತ್ಯವಾರದಂದು ರಚಿತವಾಗಿದೆಯೆಂದು ಉಲ್ಲೇಖಿತವಾಗಿದೆ. ಇದು ಕ್ರಿ.ಶ. ೧೫೨೭ ನೆಯ ಇಸವಿ ಜುಲೈ ತಿಂಗಳಿನಿಂದ ೨೯ ಸೋಮವಾರಕ್ಕೆ ಸರಿ ಹೊಂದುತ್ತದೆ. ಆದರೆ ಇದು ಸರ್ವಜಿತು ಸಂವತ್ಸರ ಎಂಬುದು ಗಮನಾರ್ಹ ಅಂಶ ಎಂದು ಲೇಖಕರು ತಿಳಿಸಿದ್ದಾರೆ. ಶಾಸನದ ಶಿಲ್ಪದ ಬಗ್ಗೆ ಹೇಳುವುದಾದರೆ ಶಾಸನದ ಮೇಲ್ಭಾಗದಲ್ಲಿ ಶಂಖ, ಚಕ್ರ, ಸೂರ್ಯ, ಚಂದ್ರ ಹಾಗು ಮೂರು ನಾಮದ ಚಿತ್ರಗಳಿವೆ. ಶಾಸನ ಬರಹದ ಕೆಳಭಾಗದಲ್ಲಿ ವೀರನೊಬ್ಬನು ಹೆಬ್ಬುಲಿಯ ಮೇಲೆ ಆಕ್ರಮಣ ಮಾಡುತ್ತಿರುವ ರೇಖಾ ಚಿತ್ರವಿದೆ. ಮತ್ತೊಬ್ಬ ವ್ಯಕ್ತಿ ಕೈಯಲ್ಲಿ ತ್ರಿಶೂಲ ಹಿಡಿದಿರುವುದು ಕಂಡು ಬರುತ್ತದೆ. ಇನ್ನೂ ಶಾಸನದ ಸಾಂಸ್ಕೃತಿಕ ಮಹತ್ವದ ಬಗ್ಗೆ ಹೇಳುವುದಾದರೆ ವಿಜಯನಗರದ ಶಾಸನದ ಕೆಳಭಾಗದಲ್ಲಿ ತಿರುಮಲರಾಯ ಹಾಗು ಶ್ರೀ ಕೃಷ್ಣದೇವರಾಯರ ಸಹಿಗಳ ಉಲ್ಲೇಖವಿದೆ. ಆದರೆ ಶಾಸನಗಳಲ್ಲಿ ಅವರ ಸಹಿಗಳ ಬದಲಿಗೆ ಶ್ರೀ ವಿರೂಪಾಕ್ಷ ಎಂಬ ಬಪವಿರುವುದು ಸಾಮಾನ್ಯ ಆದರೆ ಈ ಅಂಶ ಶಾಸನದಲ್ಲಿಕಂಡು ಬಂದಿಲ್ಲ. ಅಲ್ಲದೆ ಈ ಶಾಸನದಲ್ಲಿನ ಕಾಲ ಕ್ರಿ.ಶ. ೧೫೨೭ ಈ ಶಾಸನದ ಲಿಪಿ ಸ್ವರೂಪದ ಆಧಾರದಿಂದ ಇದು ಕ್ರಿ.ಶ. ಸುಮಾರು ೧೮ನೇ ಶತಮಾನದೆಂದು ಗುರ್ತಿಸಿದ್ದಾರೆ.[೨೩]

ಕೂಟ ಶಾಸನವೆಂದು ಗುರ್ತಿಸಲು ಸಹಾಯಕವಾದ ಮತ್ತೊಂದು ಅಂಶವೆಂದರೆ ಶಾಸನದ ಕಡೆಯ ಭಾಗದಲ್ಲಿ ತಿರುಮಲ ರಾಯ, ಶ್ರೀ ಕೃಷ್ಣ ದೇವರಾಯ, ಬಲ್ಲಾಳರಾಯ, ಆನೆಗೊಂದಿರಾಯ ನಾಲ್ಕು ಮಂದಿ ಅರಸರ ಸಹಿಗಳನ್ನು ಒಟ್ಟಿಗೆ ಕಂಡರಿಸಲಾಗಿದೆ. ಕೃಷ್ಣದೇವರಾಯನು ಕ್ರಿ.ಶ. ೧೫೦೯ ರಿಂದ ೧೫೨೯ ರ ವರೆಗೆ ಆಳ್ವಿಕೆ ಮಾಡಿದ್ದಾನೆ. ಆದರೆ ಈ ಅವಧಿಯಲ್ಲಿ ಶಾಸನೋಕ್ತವಾಗಿರುವ ತಿರುಮಲರಾಯ ಆನೆಗೊಂದಿಯ ಹಾಗು ಬಲ್ಲಾಳರಾಯರು ಅರಸರಾಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಇದು ಕೂಟ ಶಾಸನವೆಂದು ಗುರ್ತಿಸಿದ್ದಾರೆ. ಈ ಶಾಸನದಲ್ಲಿ ಇರುವಂತೆ "೫ ಗ್ರಾಮಗಳಾದ ಮಲ್ಲೇಕಾವು, ಜೇನಿಗಪಲ್ಲಿ, ಬಿರುದುಪಲ್ಲಿ, ಬೂದಿಗವಿ,· ಹಂಚಿಪಲ್ಲಿ ಈ ಐದು ಗ್ರಾಮಮುಲನು ಜಹಗೀರುಗಾ ಸೂರ್ಯಚಂದ್ರಲುಂಡು ವರಕು ನಡ ಚೇಲಾಗು ಚನಿಯ್ಬಿಯಾವ" ಎಂದು ಮುಂದುವರೆಯುತ್ತದೆ. ಇದರಂತೆ ಈ ಶಾಸನ ಹೊಂದಿರುವ ಸಂಜೀವಗೌಡರ ಮನೆತನದವರಿಗೆ ಶಾಸನೋಕ್ತ ೫ ಗ್ರಾಮಗಳಾದ ಈಗಿನ ಮಲ್ಲೇಕಾವು, ಜೇನಿಗರಹಳ್ಳಿ, ಬಿರುದೇನಹಳ್ಳಿ , ಬೂದಿಗವಿ (ಸಿದ್ದರಬೆಟ್ಟ) ಹಾಗು ಹಂಚಿಮಾರನಹಳ್ಳಿಗಳಾಗಿವೆ. ಈ ಗ್ರಾಮಗಳ ಒಡತನವು ತಲೆತಲಾಂತರದಿಂದ ಇಂದಿನವರೆಗೂ ಎಲ್ಲಾ ಪ್ರಮುಖ ಶುಭ ಕಾರ್ಯಗಳು ಉತ್ಸವ ಹಬ್ಬ ಹರಿದಿನಗಳಲ್ಲಿ ಮನೆತನದವರಿಗೆ ಅಗ್ರವೀಳ್ಯದೊಡನೆ ಗೌರವ ಲಭಿಸುತ್ತದೆ.[೨೪]

ಈ ಮೇಲೆ ತಿಳಿಸಿದ ಶಾಸನದ ಅಂಶಗಳಿಂದ ತಿಳಿದು ಬರುವುದೆಂದರೆ, ಅಂದಿನ ಕಾಲದಲ್ಲಿಯೂ ಸಂಜೀವಗೌಡರ ಮನೆತನದವರು ಗೌಡಗಾರಿಕೆಯನ್ನು ನಡೆಸುತ್ತಿದ್ದು ಅದನ್ನು ಮುಂದುವರೆಸುವ ಸಲುವಾಗಿ ಈ ಶಾಸನವನ್ನು ರಚಿಸಿದ್ದಿರಬೇಕು ಎಂದು ಊಹಿಸಬಹುದಾಗಿದೆ.

**೩.೩. ಅಪ್ರಕಟಿತ ತಾಳಪತ್ರ,**

ಪ್ರಾಚೀನ ಕಾಲದಲ್ಲಿ ರಚನೆಯಾದಂತಹ ಹಸ್ತ ಪ್ರತಿ ಶಾಸನಗಳು ಕರ್ನಾಟಕದಾದ್ಯಂತ ಹೆರಳಲಾಗಿರುವುದು ನಮ್ಮೆಲ್ಲರಿಗೆ ತಿಳಿದ ವಿಷಯವಾಗಿದೆ. ಇಂತಹ ಶಾಸನಗಳು ಅಂದಿನ ಕಾಲದ ಸಂಸ್ಕೃತಿ ಆಚಾರ ವಿಚಾರ ಲೆಕ್ಕ ಪತ್ರ ದಾನ ನೀಡಿದ ಬಗ್ಗೆ ಮಾಹಿತಿಯನ್ನು ನೀಡಲು ಮುಂದಾಗುತ್ತವೆ. ಸಾಮಾನ್ಯ ಅರ್ಥದಲ್ಲಿ ಹಸ್ತ ಪ್ರತಿ ಎಂದರೆ ಕೈಯಿಂದ ರೂಪ ಪಡೆದ ಬರವಣಿಗೆ ಎಂದರ್ಥ. ಆಂಗ್ಲ ಭಾಷೆಯಲ್ಲಿ Manu scriptum ಎಂಬುದಾಗಿ ಕರೆಯುತ್ತಾರೆ. ಇದು ಲ್ಯಾಟೀನ್ ಭಾಷೆಯ ಮೂಲಪದವಾಗಿದ್ದು Momus ಹಾಗು scriptum ಎಂಬ ಪದಗಳಿಂದ ಬಂದಿದೆ. scriptum ಎಂದರೆ ' ಕೈ' ಎಂದರೆ ಬರವಣಿಗೆ ಎಂಬ ಅರ್ಥ ಕೊಡುತ್ತದೆ.[೨೫] ಒಟ್ಟಿನಲ್ಲಿ ಹೇಳುವುದಾದರೆ ಕೈ ಬರಹವನ್ನು ಹಸ್ತ ಪ್ರತಿ ಎಂದು ಕರೆಯುತ್ತಾರೆ.

ಇಂತಹ ಹಸ್ತ ಪ್ರತಿಯ ಬರವಣಿಗೆಯನ್ನು ತಾಳಯ ಮರದ ಗರಿಯ ಸಹಾಯದಿಂದಲೂ ಬರೆಯಲಾಗುತ್ತದೆ. ಇದು ಮುದ್ರಿತ ಪ್ರತಿಗಳ ಹಾಗಲ್ಲ.[೨೬] ಛಂದೋಬದ್ದವಾದ ಕೃತಿಗಳನ್ನು ಪಾದ ಬೇದ ಮಾಡದೆ ಉದ್ದಕೆ ಬರೆದುಕೊಂಡು ಹೋಗುವುದಿದೆ. ಕೆಲವು ಹಾಳೆಗಳು ಸುಮಾರು ೨ ಅಡಿಗಳಿಗಿಂತಲೂ ಉದ್ದ ಸುಮಾರು ೩ ಇಂಚುಗಳ ಅಗಲವಾಗಿರುತ್ತದೆ. ಹಾಳೆಯ ಒಂದು ಬದಿ ಹಿಡಿಯುವಾಗ ಮತ್ತೊಂದು ಬದಿ ಜೋಲು ಬಿದ್ದಿರುತ್ತದೆ. ಇಷ್ಟಾದರೂ ಹಾಳೆ ಮುರಿಯುವುದಿಲ್ಲ. ಹಾಗು ಹದ ಮಾಡಿದ ಹಾಳೆಯ ಗರಿಯು ಬೇಗನೆ ಬೆಂಕಿಗೆ ತುತ್ತಾಗುವುದಿಲ್ಲ. ಬರೆಯುವ ಮೊದಲು ತಾಳಗರಿಯನ್ನು ಚೆನ್ನಾಗಿ ಬೇಯಿಸಿ ಅದು ಮಡಿಚಿದರೂ ಮುರಿಯದ ಹಾಗೆ ಹದ ಮಾಡುತ್ತಾರೆ. ನಂತರ ಚೂಪಾದ ಕಂಠದಿಂದ ಆದರ ಮೇಲೆ ಕೊರೆದು ಬರೆಯುವಾಗ ತೂತು ಆಚೆ ಬದಿಯಲ್ಲಿ ಏಳುವುದಿಲ್ಲ . ಹಾಳೆಗಳನ್ನು ಒಂದೇ ಅಳತೆಯಲ್ಲಿ ಕತ್ತರಿಸಿ, ಮಧ್ಯ ಒಂದು ಅಥವಾ ಎರಡು ತೂತುಗಳನ್ನು ಕೊರೆದು ಹಾಳೆಗಳನ್ನು ಕ್ರಮವಾಗಿ ಹೊಂದಿಸುವಂತೆ ಮಾಡುತ್ತಾರೆ. ಕಂಠದಿಂದ ತಾಳಗರಿಯಲ್ಲಿ ಬರೆದ ನಂತರ ಸಹದೇವಿ ಸೊಪ್ಪಿನ ರಸದಿಂದಾಗಲಿ, ಹೊಂಗರಕನ ಸೊಪ್ಪಿನ ರಸದಿಂದಾಗಲಿ ತಾಳ ಗರಿಗಳನ್ನು ಬರೆಸಿದಾಗ ಆ ರಸವು ಕಂಠ ಮೂಡಿಸಿದ ಸೊಪ್ಪಿನ ರಸದಿಂದಾಗಲಿ ತಾಳ ಗರಿಗಳನ್ನು ಒರೆಸಿದಾಗ ಆರಸವ ಕಂಠ ಮೂಡಿಸಿದ ರೇಖೆಗಳಲ್ಲಿಳಿದು ಶಾಹಿ ಹಾಕಿದಂತೆ ಅಕ್ಷರಗಳು ಸ್ಪಷ್ಟವಾಗಿ ಕಪ್ಪಾಗಿ ಕಾಣುತ್ತವೆ. ಅಲ್ಲದೆ ಈ ರಸದ ಗಾಟಿನಿಂದಾಗಿ ತಾಳಗರಿಗೆ ಹುಳು ಹಾಗು ಕುಟ್ಟು ಹಿಡಿಯುವುದಿಲ್ಲ. ಅಧ್ಯಾಯ ಮುಗಿದ ನಂತರ ತಾಳಗರಿಯಲ್ಲಿ ಶ್ರೀಕಾರ ಬರೆಯುವುದುಂಟು.[೨೭] ತಾಳಕಟ್ಟುಗಳಿಗೆ ಮರದ ಕವಚವಿರುತ್ತದೆ. ಕವಚದಲ್ಲಿ ಚಿತ್ರದ ಕೆತ್ತನೆಗಳಿರುತ್ತದೆ. ಈ ರೀತಿಯ ತಾಳಯ ಗರಿಗಳು ಕರ್ನಾಟಕದಾದ್ಯಂತ ಕಂಡು ಬಂದಿದ್ದು, ಅವುಗಳ ಸಂರಕ್ಷಣೆಯ ಕಾರ್ಯವನ್ನು ವಿವಿಧ ವಿಶ್ವವಿದ್ಯಾಲಯಗಳು ಕೈಗೊಂಡಿರುವುದನ್ನು ಇಂದು ಕಾಣಬಹುದಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಹೊಲತಾಳು ಗ್ರಾಮವು ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದ್ದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೊಲತಾಳು ಗ್ರಾಮದ ಗೌಡರ ವಂಶಕ್ಕೆ ಸೇರಿದ ಬ್ಯಂಗೇಶ್ ಎಂಬುವರ ಮನೆಯಲ್ಲಿ ದೊರೆತ ತಾಳಗರಿ ಪತ್ರವು ಸುಮಾರು ೨೦೦ ವರ್ಷಗಳ ಹಿಂದೆ ಸಿದ್ದಪ್ಪ ಎಂಬುವರು ರಚಿಸಿದ್ದಾರೆ. ಇದು ಆ ಪ್ರದೇಶದ ಸಂಸ್ಕೃತಿ ಆಚಾರ ವಿಚಾರ ಧಾರ್ಮಿಕ ಅಂಶ ಯುದ್ಧದ ಪರಿಯನ್ನು ತಿಳಿಸುತ್ತದೆ. ಈ ಶಾಸನದ ವಿವರ ಈ ಕೆಳಕಂಡಂತಿದೆ.

ತಾಳಪತ್ರದ ವಿವರ

ಸಾಮಗ್ರಿ : ತಾಳಪತ್ರ

ಪ್ರಮಾಣ ಉದ್ದ: ೩೯.೫ ಸೆಂ.ಮೀ. ಅಗಲ ೩.೬ ಸೆಂ.ಮೀ.

ಪತ್ರಗಳಸಂಖ್ಯೆ : ೪೫ , ಲಿಪಿ ಕನ್ನಡ, ಭಾಷೆ ಕನ್ನಡ

ಸಾಲುಗಳು : ೪+೪ , ಅಕ್ಷರಗಳ ಸಂಖ್ಯೆ ೬೦ -೭೦

ವಿಷಯ :ಧಾರ್ಮಿಕ ಹಾಗು ಚಾರಿತ್ರಿಕ ಅಂಶಗಳು

ಕಾಲ : ೨೦೦ ವರ್ಷಗಳು

ಪತ್ರಗಳ ಸಂಖ್ಯೆ :೧ ಇದರಲ್ಲಿ ಯುವರಾಜನು ಸೊಕ್ಕಿದ ಎರಡಾನೆಗಳನ್ನು ಪಳಗಿಸಿ ಅವುಗಳ ಮೇಲೆ ಜ್ಯೋತಿಯನ್ನಿರಿಸಿ ಪೂರ್ಣಿಮೆಯ ದಿನದಂದು ತ್ರಿನೇತ್ರನಿಗೆ ಬೆಳಗಿಸಿದನೆಂದು ತಿಳಿಸುತ್ತದೆ.

ಪತ್ರಗಳ ಸಂಖ್ಯೆ: ೨ ರಲ್ಲಿರುವಂತೆ ಚೋಳ ರಾಜರು ಯುದ್ದದ ಸಮಯದಲ್ಲಿ ಬೇರಿ, ಮೊಗ್ಗಾಳೆ, ನಗಾರಿ, ಮರಿಡೋಲುಗಳನ್ನು ಭಜಂತ್ರಿ ಜನಾಂಗದವರಿಂದ ೫೪ ದಿನಗಳವರೆಗೆ ಶಿವನ ಸನ್ನಿದಾನದಲ್ಲಿ ಮೊಳಗಿಸುತ್ತಿದ್ದರು. ಯುದ್ದದ ಸಮಯದಲ್ಲಿ ಮದ್ದಿನ ಮನೆಯ ಸುತ್ತಲೂ ಕಾವಲುಗಾರರನ್ನು ಇಡುತ್ತಿದ್ದರು. ಎಂಬ ಉಲ್ಲೇಖವಿದೆ.

ಪತ್ರ ಸಂಖ್ಯೆ : ೩ ರಲ್ಲಿ ಶಿವಲೀಲೆ ಇದ್ದರೆ ಮಾಳವ, ಮಧುರ, ದ್ರಾವಿಡ, ಕೊಂಕಣ, ಮಲೆಯಾಳ , ಕೊಡಗು ,ಕರ್ನಾಟಕ ಬಂಗಾಳ ಗೆಲ್ಲುವೆ ಎಂಬ ಉಲ್ಲೇಖವಿದೆ. ಯುದ್ದದ ಸಂದರ್ಭದಲ್ಲಿ ಚೋಳರಾಜರು ಶಿವನಿಗೆ ಪೂಜೆ ಸಲ್ಲಿಸಿ ನಂತರ ಕಾಗಳ ಪ್ರಾರಂಭಿಸುತ್ತಿದ್ದರು. ಎಂಬ ಅಂಶ ತಿಳಿಯಬಹುದಾಗಿದೆ.

ಪತ್ರಸಂಖ್ಯೆ : ೪ ರಲ್ಲಿ ಶಿವಭಕ್ತಿಗೆ ಸಂಬಂಧಿಸಿದ ಮಾತುಗಳಿದ್ದು , ರಾಜನಾದವನು ಶಿವನಿಗೆ ಪೂಜೆ, ಸಲ್ಲಿಸುತ್ತಿದ್ದ ಬಗೆಯನ್ನು ತಿಳಿಸಲಾಗಿದೆ.

ಪತ್ರ ಸಂಖ್ಯೆ : ೫ ರಲ್ಲಿ ಚೋಳರ ಮಂತ್ರಿಯಾದ ಚೊಕನೈನ ಎಂಬುವನು ಹಣವನ್ನು ದುರುಪಯೋಗ ಪಡಿಸಿಕೊಂಡದ್ದರಿಂದ ಆತನನ್ನು ಬಂಧಿಸಲಾಯಿತು. ಎಂದು ತಿಳಿಸುತ್ತದೆ.

ಪತ್ರ ಸಂಖ್ಯೆ : ೬ ರಲ್ಲಿ ಮನದೊಳಗೆ ಶತ್ರುಗಳು ವಿಷ ಕಾರುತ್ತಿದ್ದು ಅವರನ್ನು ಸೋಲಿಸಿ ಅವರ ಆನೆಯನ್ನು ಬಂಧಿಸಿದನು. ಶತ್ರುವಿನ ದಂಡು ಬರುವ ಸಂದರ್ಭದಲ್ಲಿ ಚೋಳರಾಜ ಈಶ್ವರನನ್ನು ಸ್ಮರಿಸುತ್ತಿದ್ದನೆಂದು ತಿಳಿಸಲಾಗಿದೆ.

ಪತ್ರ ಸಂಖ್ಯೆ : ೭ ರಲ್ಲಿ ರಾಜನು ಮಾಳವ, ಮಧುರ, ದ್ರಾವಿಡ, ಕೊಂಕಣ, ಮಲೆನಾಡ ವನದ ಮಧ್ಯೆ ಆಯುಧವಿಡಿದು ಸಂಚರಿಸಿದ ಬಗೆಯನ್ನು ತಿಳಿಸಲಾಗಿದೆ.

ಪತ್ರಸಂಖ್ಯೆ : ೮ ರಲ್ಲಿ ಯುದ್ದಕ್ಕೆ ಹೋಗುವ ಸಂದರ್ಭದಲ್ಲಿ ರಾಜನಾದ ರಾಜ ರಾಜೇಂದ್ರ ಚೋಳನು ಶಿವನ ಮುಂದೆ ದ್ಯಾನಸಕ್ತನಾದ ಬಗ್ಗೆ ವಿವರಿಸುತ್ತದೆ. ಹಾಗು ಅರಮನೆಯ ಸುತ್ತಲೂ ಕಂದರದೊಳಗಿದ್ದ ಜಲಚರ ಪ್ರಾಣಿಗಳನ್ನು ಹೆಸರಿಸುತ್ತದೆ.

ಪತ್ರಸಂಖ್ಯೆ : ೯ ರಲ್ಲಿ ರಾಜನು ಕನ್ಯೆಗೆ ಮನಸೋತು ದೇಹವನ್ನಂಚಿಕೊಂಡ ಬಗ್ಗೆ ಮಾಹಿತಿ ನೀಡುತ್ತದೆ. ನಂತರ ತುರುಗವನ್ನೇರಿ ಗಿರಿಗೆ ಬಂದು ಶಿವನಿಗೆ ವಂದಿಸಿದನೆಂದು ಉಲ್ಲೇಖಿಸಲಾಗಿದೆ.

ಪತ್ರ ಸಂಖ್ಯೆ : ೧೦ ರಿಂದ ೧೫ ರಲ್ಲಿ ಶಿವನ ಜಾತ್ರೆಯ ಸಂದರ್ಭದಲ್ಲಿ ಪೆರ್ಮಾಳ್ ಚೋಳನು ಶಿವಪೂಜಕರಿಗೆ ಸಂಗೀತ ನುಡಿಸಲು ಆಜ್ಞೆ ಮಾಡಿ ಶಿವನಿಗೆ ಮಲ್ಲಿಗೆ ಪುಷ್ಪ ಮುಡಿಸಿದನೆಂದು ತಿಳಿಸಲಾಗಿದೆ.

ಪತ್ರ ಸಂಖ್ಯೆ :೧೯ ನೇ ಪತ್ರದಲ್ಲಿ ಶಿವನಜಾತ್ರೆಗೆ ಅಪಾರ ಜಂಗಮರು ನೆರೆದಿದ್ದರು. ಪೆರ್ಮಾಳ್ ಚೋಳನು ಶಿವಪೂಜಕರನ್ನು ಕರೆ ಎಂದು ತಿಳಿಸಿ ಆತನು ತಳಿರು ತೋರಣಗಳನ್ನು ಬೀದಿಯ ಗುಡಿಗಳಿಗೆ ಶೃಂಗರಿಸಲು ತಿಳಿಸಿದನು.

ಪತ್ರ ಸಂಖ್ಯೆ : ೨೩ ರಲ್ಲಿ ಶ್ರೀಶೈಲ ಚನ್ನ ಮಲ್ಲೇಶನ ಕತೆಯನ್ನು ಶಿವಯೋಧ ಯುವತಿಗೆ ಸವಿನುಡಿಯಲ್ಲಿ ನುಡಿಯುತ್ತಿದ್ದು, ಈ ಕತೆಯಲ್ಲಿ ಯಮಧೂತರು ಶಿವಭಕ್ತನನ್ನು ಕರೆದೊಯ್ಯಲು ಬಂದಿದ್ದಾರೆಂದು ಉಲ್ಲೇಖಿಸಲಾಗಿದೆ.

ಪತ್ರ ಸಂಖ್ಯೆ : ೨೪ ರಿಂದ ೨೫ ರಲ್ಲಿ ಜಂಗಮರ ಭಕ್ತಿಪೂರ್ವಕ ಕಾಯಕಗಳ ಬಗ್ಗೆ ತಿಳಿಸಲಾಗಿದೆ. ಶಿವನು ಬಿಳಿ ನಂದಿಯನ್ನೇರಿ ಭೂಮಿಗೆ ಬಂದನೆಂದು ಅವನ ರೂಪ ಲಾವಣ್ಯಗಳನ್ನು ವಿವರಿಸಲಾಗಿದೆ.

ಪತ್ರ ಸಂಖ್ಯೆ : ೨೬ ರಲ್ಲಿ ದೊರೆ ಮಗನೆಂಬ ಆಶ್ಚರ್ಯ ಬೇಡ. ಎಲ್ಲರೂ ಸಮಾನರೆಂದು ರಾಜನು ಬ್ರಾಹ್ಮಣ ಯುವಕನಿಗೆ ತಿಳಿಸುತ್ತಾನೆ.

ಪತ್ರ ಸಂಖ್ಯೆ :೨೭ ನೇ ಪತ್ರವು ಅಂದಿನ ಸಮಾಜದಲ್ಲಿದ್ದ ವೇಶ್ಯೆ ಪದ್ಧತಿಯನ್ನು ತಿಳಿಸುತ್ತದೆ. ಒಟ್ಟಾರೆಯಾಗಿ ಈ ಶಾಸನದಲ್ಲಿರುವ ಅಂಶವು ಪುರಂಗಣನಾಥನು ಕೇಳಿದ ಕಥೆಯಾಗಿದ್ದು, ಚೋಳರಾಜರು ಅಂದು ಶಿವನ ಮೇಲಿಟ್ಟಿದ್ದ ಭಕ್ತಿಯ ಬಗ್ಗೆ ತಿಳಿಸುತ್ತದೆ.

ಪತ್ರ ಸಂಖ್ಯೆ :೨೮ ನೇ ಪತ್ರದಲ್ಲಿ ನಿತ್ಯದಾಸೋಹ ಮಾಡುವ ಗೋವಿಂದ ಭಟ್ಟನ ತಾತ ಒಂದು ಸಾವಿರ ಕಡಗ ಸಾಲ ತಂದು ನರಸಿಂಗನ ಮನೆಯ ಹಿರಿಯ ಸಹೋದರ ಮಾವ ಕೆರೆ ಬಾವಿ ವನವನ್ನು ರಕ್ಷಿಸಿದನು. ಇದರಿಂದ ತಿಳಿದ ಅಂಶವೆಂದರೆ ಅಂದಿನ ಕಾಲದಲ್ಲಿ ಕೆರೆ, ಬಾವಿ, ವನಗಳಿಗೆ ರಕ್ಷಣೆ ನೀಡಿ ಬೆಳೆಸುತ್ತಿದ್ದಾರೆಂದು ತಿಳಿಯಬಹುದು.

ಪತ್ರ ಸಂಖ್ಯೆ : ೩೦ ರಿಂದ ೩೧ ರಲ್ಲಿ ಸಿಂಧು ಬಲ್ಲಾಳನಿಗೆ ಶಿವನು ಕಂದನಾಗಿದ್ದು , ಬಲ್ಲಾಳನು ಶಿವನನ್ನು ಆರೈಕೆ ಮಾಡಿದ ಪರಿಯನ್ನು ವಿವರಿಸಲಾಗಿದೆ. ನಂತರ ರಾಷ್ಟ್ರದೊಳಗೆ ಶಿವನು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸಿದನೆಂದು, ಯುದ್ಧದ ಸಂದರ್ಭದಲ್ಲಿ ಜೈನರೆಲ್ಲರು ಬಂದು ಶಿವನನ್ನು ಪ್ರಾರ್ಥಿಸುತ್ತಿದ್ದರೆಂದು ತಿಳಿಸಲಾಗಿದೆ. ಅಂದಿನ ಕಾಲದಲ್ಲಿ ಧಾರ್ಮಿಕ ಸಾಮರಸ್ಯವನ್ನು ಈ ಮೂಲಕ ತಿಳಿಯಬಹುದಾಗಿದೆ. ಅಲ್ಲದೆ ಬಲ್ಲಾಳನು ಅರಮನೆಯೊಳಗೆ ಮೂರ್ತಿಯನ್ನು ತಂದು ಗಂಧ, ಅಕ್ಷತೆ, ದೀವಿಗೆ, ಧೂಪ ಬೆಳಗಿ ವಂದಿಸಿದನೆಂದು ತಿಳಿಸಲಾಗಿದೆ.

ಪತ್ರ ಸಂಖ್ಯೆ :೩೨ ರಿಂದ ೩೩ ರಲ್ಲಿ ಸಿಂಧು ಬಲ್ಲಾಳನು ಮದುವೆಯಾಗಿ ತನ್ನ ಪತ್ನಿಯೊಂದಿಗೆ ಜೀವನ ನಡೆದಿದ್ದು ಶಿವನಿಗೆ ಸಂಬಂಧಿಸಿದ ಕತೆಯನ್ನು ತನ್ನ ಪತ್ನಿಗೆ ಹೇಳಿ ಸಂತೋಷ ಪಡುತ್ತಿದ್ದರು ಎಂದು ತಿಳಿಸಲಾಗಿದೆ.

ಪತ್ರ ಸಂಖ್ಯೆ :೩೪ ನೇ ಪತ್ರದಲ್ಲಿ “ ಇಳೆಯನ್ನು ಪಾಲಿಸುವ ಚೋಳನ ಪುತ್ರನ ಕಂಡು ಎಂಬ ಅಂಶವಿದ್ದರಿಂದ ಇದರಲ್ಲಿನ ವಿಷಯವು ಈ ಪ್ರದೇಶ ಚೋಳರಿಗೆ ಸಂಬಂಧಿಸಿದ್ದೆ ಆಗಿದೆ ಎಂದು ಹೇಳಬಹುದು.

ಪತ್ರ ಸಂಖ್ಯೆ :೩೪ ರಿಂದ ೩೬ ರಲ್ಲಿ ಬ್ರಾಹ್ಮಣರ ಮಗಳು ಚೋಳರಾಜನನ್ನು ವರಿಸಿ ವಿವಾಹವಾದ ಬಗೆಯನ್ನು ವಿವರಿಸಲಾಗಿದೆ.

ಪತ್ರ ಸಂಖ್ಯೆ :೩೭ ರಲ್ಲಿ ದೊರೆಯು ವೇಶ್ಯೆಗೆ ಮನಸೋತು ಬೇಡಿದ ದ್ರವವೆಲ್ಲವನ್ನು ಆಕೆಗೆ ನೀಡಿದ ಬಗ್ಗೆ ವಿವರಿಸುತ್ತದೆ.

## ೩.೪ ವೀರಗಲ್ಲುಗಳು

ಜೀವ ತೊರೆದ ಮಾನವನ ದೇಹವನ್ನು ಸಮಾಧಿ ಮಾಡಿದ ಬಳಿಕ ಆ ಸ್ಥಳವನ್ನೋ ಅಥವಾ ಮಡಿದವನ ನೆನಪು ಬರುವಂತೆ ಗುರುತುಗಳನ್ನು ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇಂತಹ ಆಚರಣೆಗಳು ನಾಡಿನ ಸಂಸ್ಕೃತಿ, ಧರ್ಮ, ಆಚಾರ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತದೆ.[೨೮] ವೀರಗಲ್ಲುಗಳ ವ್ಯಾಪ್ತಿಯ ವಿಚಾರಕ್ಕೆ ಬಂದಾಗ ಬೃಹದಾಕಾರದಿಂದ ಹಿಡಿದು ಪುಟ್ಟ ಕಲ್ಲುಗಳವರೆಗೂ ಇದರ ವ್ಯಾಪ್ತಿಯನ್ನು ಗುರ್ತಿಸಬಹುದಾಗಿದೆ. ಪ್ರಾಗಿತಿಹಾಸಿಕ ಕಾಲದಲ್ಲಿ ಕಲ್ಲಿನ ಮನೆಗಳಿಂದ ಕೂಡಿದರೆ, ಶ್ರೇಷ್ಠ ನಾಗರೀಕತೆಯಲ್ಲಿ ಅಮೃತ ಶಿಲೆಗಳವರೆಗೂ ಇವುಗಳನ್ನು ಗುರ್ತಿಸಬಹುದಾಗಿದೆ.[೨೯] ವೀರನಿಗೆ ಯಾರು ವೀರಗಲ್ಲನ್ನು ಹಾಕಿಸುತ್ತಿದ್ದಾರೆಂದರೆ ಸತ್ತ ವ್ಯಕ್ತಿಯ ನೇರ ಸಂಬಂಧಿಗಳು ಹಾಗು ವೀರನ ಬಗ್ಗೆ ಇರುವ ವಿಶ್ವಾಸಕ್ಕೆ ಕೃತಜ್ಞತೆಗೆ ವೀರಗಲ್ಲನ್ನು ಸಾರ್ವಜನಿಕರು ಹಾಕಿಸುತ್ತಿದ್ದರು.[೩೦] ಇಂತಹ ವೀರಗಲ್ಲುಗಳನ್ನು ಕರ್ನಾಟಕದಾದ್ಯಂತ ದೇವಾಲಯಗಳ ಬಳಿ ಎಂದರೆ ಸಾಮಾನ್ಯವಾಗಿ ಆಂಜನೇಯ, ಗಣಪತಿ, ವೀರಭದ್ರ ದೇವಾಲಯಗಳ ಮುಂದೆ ವಿರಳವಾಗಿರುತ್ತವೆ.[೩೧] ಕಾರಣ ವೀರನು ದೇವರ ಸನ್ನಿದಾನದಲ್ಲಿರುತ್ತಾನೆ ಎಂಬ ನಂಬಿಕೆ ಅವರಿಗಿತ್ತು. ಅಲ್ಲದೆ ದೇವಾಲಯಗಳಿಗೆ ಸಹಜವಾಗಿ ಜನರು ಹೋಗುತ್ತಿದ್ದ ಕಾರಣ ಅವರಿಗೆ ವೀರನ ಪರಾಕ್ರಮದ ಪರಿಚಯವಾಗುತ್ತದೆ. ಎಂಬುದಾಗಿ ಅವರು ಭಾವಿಸುವುದು.[೩೨] ಕೆಲವು ವೇಳೆ ಊರ ಹೊರಭಾಗದಲ್ಲಿಯೂ ನೆಟ್ಟಿರುತ್ತಾರೆ. ಸಾಮಾನ್ಯವಾಗಿ ವೀರರು ತಮ್ಮ ಸ್ವಾಮಿನಿಷ್ಠೆಯನ್ನು ವ್ಯಕ್ತಗೊಳಿಸುವಲ್ಲಿ ಊರಿಗೆ ತೊಂದರೆ ಬಂದಾಗ, ಗೋವು ರಕ್ಷಣೆ , ಹೆಣ್ಣು ಮಕ್ಕಳ ರಕ್ಷಣೆ ಮಾಡುವ ಸಂದರ್ಭದಲ್ಲಿ ಪ್ರಾಣವನ್ನರ್ಪಿಸಿದವರನ್ನು ನೆನಪಿಸುವುದಕ್ಕಾಗಿ ಈ ವೀರಗಲ್ಲುಗಳನ್ನು ನೆಡುತ್ತಿದ್ದರು.

ವೀರ ಎಂಬ ಪದವು ಸಂಸ್ಕೃತ ಭಾಷೆಯ ಪದವಾಗಿದ್ದು , ಇದು ವ್ಯಕ್ತಿಯ ಶಕ್ತಿ ಅವನ ದೈಹಿಕ ಗುಣಗಳನ್ನು ಗುರ್ತಿಸಬಹುದಾಗಿದೆ. ಇಂತಹ ಶೌರ್ಯವಂತ ವ್ಯಕ್ತಿಯು ಹೋರಾಟದಲ್ಲಿ ಮಡಿದಾಗ ವೀರಗಲ್ಲನ್ನು ಹಾಕಿಸುತ್ತಿದ್ದರು. ಹತ್ತನೇ ಶತಮಾನದ ನಂತರದಲ್ಲಿ ವೀರಗಲ್ಲುಗಳನ್ನು ಸಾಮಾನ್ಯವಾಗಿ

ವೀರಕಲ್ಲು, ವೀರಗಲ್ಲು, ಬೀರಕಲ್ಲು, ಬೀರಗಲ್ಲು ಎಂದು ಕರೆಯಲಾಯಿತು. ಈ ಪದ ಪ್ರಯೋಗಗಳು ೧೫ ನೇ ಶತಮಾನದವರೆಗೆ ಕಂಡು ಬಂದವು. ವೀರಗಲ್ಲನ್ನು ನೆಡುತ್ತಿದ್ದ ಉದ್ದೇಶವೆಂದರೆ ವೀರನ ಪರಾಕ್ರಮ ಲೋಕಕ್ಕೆ ತಿಳಿಸುವುದು ಒಂದಂಶವಾದರೆ, ವೀರಗಲ್ಲನ್ನು ನಡೆಸುವುದರಿಂದ ಆತನಿಗೆ ವೀರಸ್ವರ್ಗ ಸಿಗುತ್ತದೆ. ಎಂಬ ನಂಬಿಕೆಯಿಂದ ನಿಲ್ಲಿಸುತ್ತಿದ್ದರು. ವೀರಗಲ್ಲಿನ ಶಿಲ್ಪದ ವಿವರಗಳು ತಳಭಾಗದಿಂದ ಆರಂಭವಾಗಿ ಮೇಲಕ್ಕೆ ಹೋಗುತ್ತವೆ. ಕಾರಣ ಭೂಲೋಕದಲ್ಲಿ ಯುದ್ಧ ನೆಡಸುವುದು ಭೂ ಲೋಕದ ಮೇಲೆ ಸ್ವರ್ಗ ಇರುವುದು ಆದ್ದರಿಂದ ಭೂಲೋಕದಿಂದ ಸ್ವರ್ಗಕ್ಕೆ ವೀರನು ಹೋಗುತ್ತಾನೆಂಬ ನಂಬಿಕೆ ಶಿಲ್ಪದಲ್ಲಿ ಚಿತ್ರಿಸುತ್ತಾರೆ. ಒಂದನೇ ಹಂತದಲ್ಲಿ ಶತೃಗಳ ನಡುವೆ ವೀರ ಹೋರಾಟ ಮಾಡುವ ಚಿತ್ರ, ಎರಡನೇ ಹಂತದಲ್ಲಿ ಅಪ್ಸರೆಯರು ಚಾಮರದಾರಿಯಾಗಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುವುದು, ಮೂರನೆಯ ಹಂತದಲ್ಲಿ ಶಿವಲಿಂಗಕ್ಕೆ ವೀರನು ಪೂಜೆ ಸಲ್ಲಿಸುತ್ತಿರುವ ದೃಶ್ಯ ಕೆತ್ತಲಾಗಿರುತ್ತದೆ.

ವೀರಗಲ್ಲುಗಳನ್ನು ಇಂದಿಗೂ ಆರಾಧಿಸುವ ಪದ್ಧತಿ ಹಲವು ಕಡೆಗಳಲ್ಲಿ ಕಾಣಬಹುದಾಗಿದೆ. ಅವರಿಗಾಗಿ ಪ್ರತ್ಯೇಕ ಗುಡಿ ಕಟ್ಟಿ ಆರಾಧಿಸಿಸುತ್ತಿರುವುದು ತುಮಕೂರು, ಮೈಸೂರು, ಬೆಂಗಳೂರು, ಮಂಡ್ಯಜಿಲ್ಲೆಯ ಹಲವು ಕಡೆಗಳಲ್ಲಿ ಕಾಣಬಹುದಾಗಿದೆ. ಇಂತಹ ಗುಡಿಗಳಿಗೆ ನಾಯಕ ಜನಾಂಗದವರು ಪೂಜೆ ಸಲ್ಲಿಸುತ್ತಾರೆ. ಇಂತಹ ವೀರಗಲ್ಲುಗಳು ಸಾಮಾನ್ಯವಾಗಿ ಊರ ಹೊರಗೆ ದೇವಾಲಯಗಳ ಎದಿರು, ಕೆರೆಗಳ ಬಳಿ, ಹೊಲಗಳಲ್ಲಿ ಕಂಡು ಬರುತ್ತವೆ. ಕೆಲವು ವೀರಗಲ್ಲುಗಳ ಮೇಲೆ ಶಾಸನಗಳನ್ನು ಬರೆದಿಡಲಾಗುತ್ತದೆ. ಪ್ರಸ್ತುತ ಅಧ್ಯಯನದ ಚನ್ನರಾಯನದುರ್ಗ ಪರಿಸರದ ಹಲವು ಕಡೆಗಳಲ್ಲಿ ವೀರಗಲ್ಲುಗಳು ಹಾಗು ವೀರಗಾರರ ಗುಡಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಚನ್ನರಾಯನ ದುರ್ಗ ಪರಿಸರದಲ್ಲಿ ಅನೇಕ ವೀರಗಲ್ಲುಗಳಿದ್ದು, ಇಂದಿಗೂ ಅವುಗಳನ್ನು ಪೂಜಿಸುತ್ತಿರುವುದು ಕಂಡು ಬರುತ್ತದೆ ಅಂತಹವುಗಳಲ್ಲಿ ಪ್ರಮುಖವಾಗಿ ತೋವಿನಕೆರೆ ಗ್ರಾಮದ ಹೊರಭಾಗದ ವಿಶಾಲ ಮಂಟಪದಲ್ಲಿ ಸುಮಾರು ಹತ್ತು ವೀರಗಲ್ಲುಗಳ ಗುಂಪನ್ನು ಕಾಣಬಹುದು. ಇವುಗಳ ಕೆತ್ತನೆಯ ಶೈಲಿಯನ್ನು ಗಮನಿಸಿದಾಗ ವಿಜಯನಗರ ಕಾಲದ ವೀರಗಲ್ಲುಗಳಿಗೆ ಹೋಲಿಕೆಯಾಗಿದ್ದು ಕಂಡು ಬರುತ್ತದೆ. ಇಲ್ಲಿನ ಒಂದು ವೀರಗಲ್ಲಿನಲ್ಲಿ ವೀರನು ಶತೃಗಳ ವಿರುದ್ಧ ಹೋರಾಡುತ್ತಿದ್ದು ಪಕ್ಕದಲ್ಲಿ ಗೋವಿನ ಶಿಲ್ಪ ಖಂಡರಿಸಲಾಗಿದೆ. ಇದರಿಂದ ಈ ವೀರನು ಗೋವುಗಳ ರಕ್ಷಣೆ ಮಾಡಲು ಹೋಗಿ ಸಾವನಪ್ಪಿರಬಹುದು ಎಂದು ಗುರುತಿಸಬಹುದು. ಅದೇ ರೀತಿ ನೇಗಲಾಲ ಗ್ರಾಮದ ರಸ್ತೆಯ ಬದಿಯಲ್ಲಿ ಕಂಡು ಬರುವ ವೀರಗಲ್ಲು ೨ ೧/೨ ಅಡಿ ಉದ್ದ ೨ ೧/೨ ಅಗಲ ಹೊಂದಿದ್ದು ಕಪ್ಪು ಶಿಲೆಯಲಿಂದ ಖಂಡರಿಸಲಾಗಿದೆ. ಇದರ ಪಕ್ಕದಲ್ಲಿ ಮಹಾ ಸತಿಕಲ್ಲನ್ನು ಕಾಣಬಹುದು .

ಈ ಗುಡಿಯನ್ನು ಗೋವಿಂದಯ್ಯನಗುಡಿ ಎಂದು ಕರೆಯುತ್ತಿದ್ದು ಭಾಗಶಃ ವೀರನ ಹೆಸರು ಗೋವಿಂದಯ್ಯ ಇರಬಹುದಾಗಿದೆ. ಇದೇ ಗ್ರಾಮದಲ್ಲಿ ಸಿದ್ದಯ್ಯನವರ ಜಮೀನಿನಲ್ಲಿರುವ ವೀರಗಲ್ಲು

ಮೂರು ಹಂತದಲ್ಲಿ ಖಂಡರಿಸಲಾಗಿದೆ. ಮೊದಲ ಹಂತದಲ್ಲಿ ವೀರನು ಶತೃಗಳ ವಿರುದ್ಧ ಪಾಲ್ಗೊಂಡಿರುವುದು. ಎರಡನೇ ಹಂತದಲ್ಲಿ ಮಡಿದ ವೀರನನ್ನು ಗಗನ ಸಖಿಯರು ಪಲ್ಲಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯ, ಮೂರನೇ ಹಂತದಲ್ಲಿ ಸ್ವರ್ಗದಲ್ಲಿ ವೀರನು ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವಂತೆ ಖಂಡರಿಸಲಾಗಿದೆ.

ಅದೇ ರೀತಿ ತುಂಬಾಡಿ ಗ್ರಾಮದ ಆಂಜನೇಯ ದೇವಾಲಯದ ಆವರಣದಲ್ಲಿ ನಾಲ್ಕು ಅಡಿ ಎತ್ತರದ ವೀರಗಲ್ಲು ಕಂಡು ಬಂದಿದ್ದು ಮೂರು ಪಟ್ಟಿಕೆಯನ್ನು ಒಳಗೊಂಡಿದೆ. ಮೊದಲ ಹಂತದ ಪಟ್ಟಿಯ ನಂತರ "ಸ್ವಸ್ತಿಶ್ರೀ ಶುಕ್ರ ಸಂವತ್ಸರದ ತುಂಬಾಡಿ"ಎಂದು ಪ್ರಾರಂಭವಾಗುವ ಶಾಸನವಿದ್ದು ಲಿಪಿ ಕನ್ನಡ ಲಿಪಿಯನ್ನು ಬಳಸಲಾಗಿದೆ. ಈ ಶಾಸನದ ಪ್ರಕಾರ ಬಿದನೂರಿನಲ್ಲಿ ಭೂತುಗನೆದುರು ತುಂಬೆಪಾಡಿಯ ಗಡ್ಡಯ್ಯನ ಮಗ ಕಾದು ವೀರಸ್ವರ್ಗ ಸೇರಿದ ಸಂಗತಿ ತಿಳಿಸುತ್ತದೆ. ಇದರ ಪ್ರಕಾರ ಈ ಶಾಸನವು ಗಂಗರ ಕಾಲಕ್ಕೆ ಸೇರಿದೆ ಇದು ಹನ್ನೆರಡನೇ ಶತಮಾನದು ಎಂದು ಗುರುತಿಸಲಾಗಿದೆ. ಎರಡನೇ ಪಟ್ಟಿಕೆಯಲ್ಲಿ ವೀರನನ್ನು ೧೮ ಜನ ಸ್ತ್ರೀಯರು ಪಲ್ಲಕ್ಕಿಯ ಮೇಲೆ ಛಾಮರ ಬೀಸುತ್ತಾ ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದೆ. ಮೂರನೆ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಪೂಜೆ ಸಲ್ಲಿಸುವ ದೃಶ್ಯ ಖಂಡರಿಸಲಾಗಿದೆ. ಹಾಗು ಜುಂಜರಾಮನಹಳ್ಳಿಯ ಮಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಒಂದು ಅಡಿ ಎತ್ತರ ಒಂದು ಅಡಿ ಉದ್ದ ಹೊಂದಿದ ವೀರಗಲ್ಲನ್ನು ಕಾಣಬಹುದು. ಇದರ ಪಕ್ಕದಲ್ಲಿ ಮಲ್ಲೇಶ್ವರ ದೇವರಿಗೆ ಕೈ ಮುಗಿಯುತ್ತಿರುವ ಶಿಲ್ಪವನ್ನು ಕೆತ್ತಲಾಗಿದೆ. ಈ ಶಿಲ್ಪದ ಕೆತ್ತನೆಯನ್ನು ಗಮನಿಸಿದಾಗ ಕಿರೀಟ ಧರಿಸಿದ್ದು, ತೋಳ್ಬಂದಿ, ಕೈಬಳೆ, ಕಾಲ್ಗಡಗ ಧರಿಸಿದ್ದು ಈ ಶಿಲ್ಪವು ಚೋಳರಾಜನ ಶಿಲ್ಪವಾಗಿರಬಹುದು. ಒಟ್ಟಿನಲ್ಲಿ ಚನ್ನರಾಯನ ದುರ್ಗ ಪರಿಸರದಲ್ಲಿ ವೀರಗಲ್ಲುಗಳು ತುಂಬಾಡಿ ನೇಗಲಾಲ, ಹೊಲತಾಳು, ಜೋನಿಗರ ಹಳ್ಳಿ, ತೋವಿನಕೆರೆ, ಜುಂಜರಾಮನಹಳ್ಳಿಗಳಲ್ಲಿ ಕಂಡು ಬಂದಿದ್ದು ಇವುಗಳನೆಲ್ಲ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೩.೫ ಮಾಸ್ತಿಗಲ್ಲು

ಮಾಸ್ತಿಗಲ್ಲುಗಳು ಕರ್ನಾಟಕದಾದ್ಯಂತ ಹಲವು ಕಡೆಗಳಲ್ಲಿ ಕಂಡು ಬರುತ್ತವೆ. ಇಂತಹ ಮಾಸ್ತಿಗಲ್ಲುಗಳುಯಾವುವು? ಇವುಗಳ ಮಹತ್ವವೇನು? ಎಂಬ ಅಂಶವನ್ನು ತಿಳಿದಿರಬೇಕಾಗುತ್ತದೆ. ಸಾಮಾನ್ಯವಾಗಿ ಮಾಸ್ತಿ ಎಂಬ ಪದವು ಸಂಸ್ಕೃತದ ಮಹಾ ಸತಿ ಪದದ ಸಂಕ್ಷಿಪ್ತ ರೂಪವಾಗಿದೆ. ಪತಿವ್ರತೆಯಾದ ಹೆಂಗಸು ತನ್ನ ಗಂಡ ಸತ್ತ ಸಂದರ್ಭದಲ್ಲಿ ಆಕೆಯು ಸಹಗಮನ ಮಾಡಿದ ಸಂಗತಿಯನ್ನು ಸೂಚಿಸಲು ನೆಟ್ಟ ಕಲ್ಲಿಗೆ ಮಾಸ್ತಿಗಲ್ಲು ಎಂದು ಕರೆಯುತ್ತಾರೆ. ಮಹಾಸತಿ ಮಾಸ್ತಿ, ಮಹಾಸತಿ ಕಲ್ಲು ಇವೆಲ್ಲವು ಒಂದೇ ಅರ್ಥವನ್ನು ಒಳಗೊಂಡಿರುತ್ತವೆ. ಅಂದಿನ ಕಾಲದ ಸತಿಯರು ಕೆಲವು ಬಾರಿ ಪತಿಯ ಶವದೊಂದಿಗೆ ಪ್ರಾಣ ಬಿಡುವ ಮನಸ್ಸಿಲ್ಲದಿದ್ದರೂ, ಸಮಾಜಕ್ಕೆ ಹೆದರಿ ಅನಿವಾರ್ಯವಾಗಿ ಒಪ್ಪಿಕೊಳ್ಳುತ್ತಿದ್ದಳು. ಸತಿಯು ಪ್ರಾಣ ತ್ಯಾಗ ಮಾಡುವ ಪದ್ಧತಿಗಳಲ್ಲಿ ಎರಡು ಬಗೆಗಳಿವೆ.

1) ಸಹಗಮನ ಪದ್ಧತಿ ಇದರಲ್ಲಿ ಗಂಡನ ಶವದೊಂದಿಗೆ ಚಿತೆಗೇರುವುದು

2)ಅನುಗಮನ ಪದ್ಧತಿ ಗಂಡ ದೂರದಸ್ಥಳದಲ್ಲಿ ಮಡಿದರೆ ಅವನಿಗೆ ಪ್ರಿಯವಾದ ವಸ್ತುಗಳನ್ನು ಹಿಡಿದು ಚಿತೆಯೇರುವ ಪದ್ಧತಿಯಾಗಿದೆ.ಆಕೆ ಚಿತೆಗೇರಲು ಸಜ್ಜಾಗುತ್ತಿದ್ದ ಬಗ್ಗೆ ಹೇಳುವುದಾದರೆ ಊರೊಡೆಯನ ಮನ್ನಣೆ ಪಡೆದು ಮಹಾ ಸತಿ ಹಳದೀ ಸೀರೆಯನ್ನುಟ್ಟು ಒಂದು ಕೈಯಲ್ಲಿ ನಿಂಬೆಹಣ್ಣು ಮತ್ತೊಂದು ಕೈಯಲ್ಲಿ ಕನ್ನಡಿ ಹಿಡಿದು ದಂಡೆ, ಬಾಸಿಗ, ಕುಂಕುಮ ಸಿಂಗರಿಸಿಕೊಂಡು ಬೀದಿಯಲ್ಲಿ ಕಾಲ್ನಡಿಗೆಯಿಂದ ಇಲ್ಲವೇ ಕುದುರೆಯಲ್ಲಿ ಪಲ್ಲಕ್ಕಿಯನ್ನೇರಿ ಬರುತ್ತಿದ್ದಳು.[೩೩] ಆಕೆ ಚಿತೆಗೆ ಪ್ರವೇಶಿಸುವುದೇ ತಡ ಜನರು ಜಯಘೋಷ ಮಾಡುತ್ತಿದ್ದರೆಂದು ಕಾವ್ಯಗಳು ತಿಳಿಸುತ್ತವೆ. ಹೀಗೆ ಪ್ರಾಣ ತ್ಯಾಗ ಮಾಡಿದ ಮಹಾ ಸತಿಯರ ಶಿಲ್ಪಗಳು ಈ ಪರಿಸರದಲ್ಲಿ ನೇಗಲಾಲ , ಜೋನಿಗರಹಳ್ಳಿ. ತೋವಿನಕೆರೆ, ಗ್ರಾಮಗಳಲ್ಲಿ ಕಂಡು ಬಂದಿದ್ದು ಇವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು ಅವುಗಳ ವಿವರ ಈ ಕೆಳಕಂಡಂತೆ ತಿಳಿಸಲಾಗಿದೆ.

ನೇಗಲಾಲ ಗ್ರಾಮದ ಗೋವಿಂದಯ್ಯನಗುಡಿಯಲ್ಲಿ ಕಪ್ಪು ಶಿಲೆಯ ಗ್ರಾನೈಟ್ ಶಿಲೆಯನ್ನು ಬಳಸಿ ಖಂಡರಿಸಲಾದ ಮಹಾಸತಿಗಲ್ಲು ೨ ೧/೨ ಅಡಿ ಉದ್ದ ೨ ೧/೨ ಅಡಿ ಅಗಲ ಹೊಂದಿದ್ದು ಶಿಲ್ಪವು ಕೇಶವನ್ನು ಕಟ್ಟಿಕೊಂಡು ಕೊರಳಿಗೆ ತಾಳಿ ಇತರೆ ಸರಮಾಲೆಯನ್ನು ಧರಿಸಿದೆ. ಕಿವಿಗಳು ಅಗಲವಾಗಿದ್ದು ಕುಂಡಲವನ್ನು ಧರಿಸಿದ್ದಾಳೆ. ತನ್ನ ಬಲಗೈನಲ್ಲಿ ನಿಂಬೆಹಣ್ಣು ಹಾಗು ಎಡಗೈಯಲ್ಲಿ ದರ್ಪಣ ಹಿಡಿದು ನಿಂತ ರೀತಿ ಖಂಡರಿಸಲಾಗಿದೆ. ಅದೇ ರೀತಿ ಕೆಂಪು ಕಲ್ಲಿನ ಗ್ರಾನೈಟ್ ಶಿಲೆಯಿಂದ ಕೆತ್ತಲಾದ ಮಹಾಸತಿಗಲ್ಲಿನಲ್ಲಿ ಸೂರ್ಯ ಚಂದ್ರನನ್ನು ಖಂಡರಿಸಿದ್ದು , ಹಣೆಗೆ ಕುಂಕುಮ ಹಾಗು ಸೀರೆಯ ನೆರಿಗೆ ನೆಲಕ್ಕೆ ತಾಕುವಂತೆ ಕೆತ್ತಲಾಗಿದೆ. ಇಂದು ಗ್ರಾಮ ದೇವತೆಯಾಗಿ ಪೂಜಿಸುತ್ತಿರುವ ಕಾವಾಲಮ್ಮ ದೇವಾಲಯ ಎದುರಿಗೆ ಈ ಮಹಾಸತಿಗಲ್ಲು ಇದೆ. ಆದ್ದರಿಂದ ಮಹಾಸತಿ ಕಾವಲಮ್ಮನೇ ಆಗಿರಬಹುದೆಂದು ತಿಳಿದು ಬರುತ್ತದೆ.

ಮಹಾಸತಿಯ ಪಕ್ಕದಲ್ಲಿ ಚಾಮರ ಬೀಸುತ್ತಿರುವ ಕನ್ಯೆಯ ಶಿಲ್ಪ ಕಂಡು ಬಂದಿದ್ದು ಇದನ್ನು ಬಿಳಿಯ ಗ್ರಾನೈಟ್ ಶಿಲೆಯಿಂದ ಖಂಡಿರಿಸಲಾಗಿದ್ದು, ಈ ಶಿಲ್ಪದ ಹಿಂಬದಿಯಲ್ಲಿ ಅರ್ಧಗೋಳಾಕಾರದ ಬಳ್ಳಿಯ ಕೆತ್ತನೆ ಒಳಗೊಂಡಿದೆ. ಈ ಶಿಲ್ಪದ ಶೈಲಿ ಗಮನಿಸಿದರೆ, ವಿಜಯನಗರದ ಕಾಲದ್ದಾಗಿದೆ. ಅದೇ ರೀತಿ ಜೋನಿಗರ ಹಳ್ಳಿಯ ರಸ್ತೆಯ ಬದಿಯಲ್ಲಿ ಮಹಾಸತಿಗಲ್ಲು ಕಂಡು ಬಂದಿದ್ದು , ವೀರನ್ನು ಕತ್ತಿ ಗುರಾಣಿ ಹಿಡಿದು ಖಡ್ಗವನ್ನು ತನ್ನ ಬಲ ಭುಜದ ಮೇಲೆ ಇಟ್ಟುಕೊಂಡು ಪಕ್ಕದ ಮಹಾಸತಿ ಶಿಲ್ಪವು ನಿಂಬೆಹಣ್ಣು ಹಾಗು ದರ್ಪಣ ಹಿಡಿದು ಕುಣಿಯುತ್ತಿರುವಂತೆ ಖಂಡರಿಸಲಾಗಿದೆ. ಇದೇ ರೀತಿಯ ಶಿಲ್ಪಗಳು ತೋವಿನಕೆರೆ ಗ್ರಾಮದಲ್ಲೂ ಕಂಡುಬರುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ಅಂದಿನ ಕಾಲದಲ್ಲಿ ಹೊರಡಿಸಿದ ಶಾಸನಗಳು, ವೀರಗಲ್ಲುಗಳು ಹಾಗು ಮಹಾಸತಿಗಲ್ಲುಗಳು ಒಂದು ಪ್ರದೇಶದ ಇತಿಹಾಸದ ರಚನೆಗೆ ಸಹಾಯಕವಾಗುತ್ತವೆ. ಹಾಗೆ ಆ ಪ್ರದೇಶದ ಜನರ ಸಂಸ್ಕೃತಿ ಆಚಾರ-ವಿಚಾರ, ನಡೆ- ನುಡಿ, ಧಾರ್ಮಿಕ ಪರಿಸ್ಥಿತಿಯನ್ನು ತಿಳಿಯಲು ಸಹಾಯಕವಾಗಿವೆ ಎಂದರೆ ತಪ್ಪಾಗಲಾರದು.

## ಅಡಿ ಟಿಪ್ಪಣಿ

೧ ತಿಪ್ಪೇರುದ್ರಸ್ವಾಮಿ ಹೆಚ್, ೧೯೯೮: ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೧

೨ ಅದೇ ಪು. ೨೩೫

೩ ನಿಂಗಣ್ಣ ಪಿ.ಸಿ, (ಸಂ) ೨೦೦೮ : ಕನ್ನಡ ಸಾಹಿತ್ಯ, ಸಾಹಿತ್ಯ ಸಂಸ್ಕೃತಿ ಕೋಶ, ಪು. ೩೨೫

೪ ಅದೇ ಪು. ೩೨೫

೫ ಅದೇ ಪು. ೩೨೬

೬ ಕೃಷ್ಣಕುಮಾರ್ ಸಿ.ಪಿ. ೧೯೯೩ : ಶಾಸನಶಾಸ್ತ್ರ ಪ್ರವೇಶ, ಪು. ೫೬

೭ ಚಿದಾನಂದಮೂರ್ತಿ ಎಂ., ೧೯೭೯ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು. ೩೫

೮ ಗೋಪಾಲ್ ಆರ್. (ಸಂ.), ೨೦೦೯ : ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೩೧

೯ ಅದೇ ಪು. ೭೨

೧೦ ಭಗವತಿ ಎಸ್.ಎಸ್., ಮೇಲಿನ ಮನಿ ಹೆಚ್.ಎಸ್., ೨೦೦೪ : ಕನ್ನಡ ಶಾಸನಗಳ ಅಧ್ಯಯನ, ಪು. ೮

೧೧ ರವೀಂದ್ರನಾಥ ಕೆ. ೨೦೦೦ : ಕನ್ನಡ ದಾಖಲು ಸಾಹಿತ್ಯ, ಪು. ೩೫

೧೨ EC.Vo XII, No. 54, ಕ್ರಿ.ಶ. 1656: ಮಧುಗಿರಿ

೧೩ ಅದೇ, ಮಧುಗಿರಿ

೧೪ EC.Vo XII, No. 50, 1502: ಮಧುಗಿರಿ

೧೫ ಗೋಪಾಲ್ಆರ್, ೨೦೦೯ : ಪೂರ್ವೋಕ್ತ, ಪು.೫೧೭

೧೬ EC.Vo XII, No. 12, 950 ಮಧುಗಿರಿ

೧೭ MAR 1930: Vol -8, M.A.R.Sources of Karnatka History Vo. P.No 33

೧೮ ನಾಗಮಣಿ ಪದ್ಮನಾಭ ೨೦೦೩: ಕೊರಟಗೆರೆ ತಾಲ್ಲೂಕು ದರ್ಶನ, ಆಗ್ನೇಯವಾಣಿ ಪತ್ರಿಕೆ, ಪು. ೩೩

೧೯ EC.Vo XII, No 68, 1766: ಮಧುಗಿರಿ

೨೦ ರವೀಂದ್ರನಾಥ. ಕೆ., ೨೦೦೦ : ಪೂರ್ವೋಕ್ತ, ಪು. ೩೫

೨೧ ಎಸ್.ಎಸ್. ಭಗವತಿ ಹೆಚ್.ಎಸ್.ಮೇಲಿನ ಮನಿ, ೨೦೦೪: ಪೂರ್ವೋಕ್ತ , ಪು. ೬

೨೨ ನಂಜುಂಡ ಪ್ರಸಾದ್ .ಕೆ., ಮಂಜುನಾಥ ಎಂ.ಜಿ.,೨೦೦೧: ಚನ್ನರಾಯನ ದುರ್ಗದ ಅಪ್ರಕಟಿತ ತಾಮ್ರ ಶಾಸನ, ಇತಿಹಾಸ ದರ್ಶನ, ಸೂರ್ಯನಾಥ್ ಕಾಮತ್, (ಸಂ.) ೧೬, ಪು. ೪೨

೨೩ ಅದೇ ಪು. ೪೨

೨೪ ಅದೇ ಪು.೪೩

೨೫ ನಿಂಗಣ್ಣ ಪಿ.ಸಿ., ೨೦೦೮ : (ಸಂ), ಪೂರ್ವೋಕ್ತ ಪು. ೩೪೮

೨೬ ಅದೇ ಪು. ೩೪೫

೨೭ ರಾಜಗೋಪಾಲ ಚಾರ್ಯ, ೧೯೯೧ : ತಾಡವಾಲೆ ಗ್ರಂಥಸೂಚಿ, ಪು. ೨೦

೨೮ ಶೇಷಾದ್ರಿ ಆರ್. ೧೯೮೨ : ಕರ್ನಾಟಕದ ವೀರಗಲ್ಲುಗಳು,ಪು. ೧೩

೨೯ ಅದೇ ಪು. ೭೧

೩೦ ಅದೇ ಪು.೭೯

೩೧ ಅದೇ ಪು.೮೪

೩೨ ಅದೇ ಪು.೮೫

೩೩ ಭಗವತಿ ಎಸ್.ಎಸ್.,ಮೇಲಿನ ಮನಿ ಹೆಚ್.ಎಸ್., ೨೦೦೪ : ಪೂರ್ವೋಕ್ತ ಪು. ೧೩೪

# ಅಧ್ಯಾಯ -ನಾಲ್ಕು

## ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

ಮಾನವನು ಅಲೆದಾಡುವ ಪ್ರವೃತ್ತಿಯನ್ನು ಬಿಟ್ಟು ಒಂದು ಕಡೆ ನೆಲೆನಿಲ್ಲಲು ಪ್ರಾರಂಭಿಸಿದಾಗಿನಿಂದ, ಆತ ವಾಸಿಸಲು ತನಗನುಕೂಲವಾಗುವ ರೀತಿಯಲ್ಲಿ ಗೃಹಗಳನ್ನು ನಿರ್ಮಿಸಲು ಪ್ರಾರಂಭಿಸಿದನು.ಕಾರಣ ಮಾನವ ಪ್ರಕೃತಿಯೊಡನೆ ಬದುಕಬೇಕಾದ ಸಂದರ್ಭದಲ್ಲಿ ಪ್ರಕೃತಿಯ ವಿಸ್ಮಯಗಳಾದ ಗುಡುಗು, ಸಿಡಿಲು, ಮಳೆ, ಗಾಳಿ, ಕಾಡ್ಗಿಚ್ಚು ಮೊದಲಾದವುಗಳು ಅವನಲ್ಲಿ ಭೀತಿ ಹುಟ್ಟಿಸಿದವು. ಇವುಗಳಿಂದ ರಕ್ಷಣೆ ಪಡೆಯಲು ಗೃಹಗಳ ನಿರ್ಮಾಣಕ್ಕೆ ಮುಂದಾದನು.ಸಾಮಾನ್ಯವಾಗಿ ವಾಸ್ತು ಎಂದರೆ ಕಟ್ಟಡ ಎಂದರ್ಥ. ಮನುಷ್ಯನ ವಾಸಕ್ಕೆ ಮನೆಯನ್ನು ಕಟ್ಟಲು ಯೋಗ್ಯವಾದ ಭೂಮಿ ಇಂತಹ ಕಟ್ಟಡಗಳು ಮುಂದೆ ದೇವಾಲಯಗಳಾಗಿರಬಹುದು.

ವಾಸ್ತುಶಿಲ್ಪ ಎಂಬ ಪರಿಭಾಷೆಗೆ ವಿಶಾಲವಾದ ಅರ್ಥವ್ಯಾಪ್ತಿ ಇದ್ದರೂ ಸಾಮಾನ್ಯವಾಗಿ ದೇವಾಲಯಗಳು ಮಾತ್ರ ಕಣ್ಮುಂದೆ ನಿಲ್ಲುತ್ತವೆ. ಸ್ತೂಪ, ಚೈತ್ಯ, ವಿಹಾರ, ಬಸದಿ, ಮಸೀದಿ, ಚರ್ಚ್ ಕೆರೆಕಟ್ಟೆ, ಕೋಟೆ ಹಾಗು ಮನೆಗಳಂತಹ ಎಲ್ಲಾ ರಚನೆಗಳೂ ವಾಸ್ತುಶಿಲ್ಪಗಳೇ ಆಗಿವೆ. ಆದರೆ ಅಧ್ಯಯನದ ಅನುಕೂಲಕ್ಕಾಗಿ ವಾಸ್ತುಶಿಲ್ಪವನ್ನು ದೇವಾಲಯಕ್ಕೂ ಹಾಗು 'ಶಿಲ್ಪ' ಎಂಬುದನ್ನು ಮೂರ್ತಿಗಳಿಗೆ ಅನ್ವಯವಾಗುವಂತೆ ಅನುಕ್ರಮದಲ್ಲಿ ಬಳಸುತ್ತಾರೆ.[೧]

ವಾಸ್ತು ಶಿಲ್ಪವನ್ನು ಕುರಿತು ಹಲವು ಪ್ರಾಚೀನ ಶಾಸ್ತ್ರ ಗ್ರಂಥಗಳು ಹಾಗು ವಿದ್ವಾಂಸರು ಹಲವು ವಿಚಾರಧಾರೆಗಳನ್ನು ಹರಿಸಿರುವುದನ್ನು ಗಮನಿಸಬಹುದು. ಅಂತಹವುಗಳಲ್ಲಿ ಬಹುಮುಖ್ಯವಾಗಿ ಬೃಹತ್ಸಂಹಿತ, ಮಾನಸಾರ, ಮಯಮತ, ಸಮರಾಂಗಣ, ಸೂತ್ರಧಾರ, ಕಾಶ್ಯಪಶಿಲ್ಪ, ಅಗಸ್ತ್ಯ ಸಕಲಾಧಿಕಾರ, ಅಪರಾಜಿತ ಪುಚ್ಛಾ, ಪ್ರಸಾದ ಮಂಡನ, ರೂಪಮಂಡನ, ಅಭಿಲಾಷಿತಾರ್ಥ ಚಿಂತಾಮಣಿ, ತಂತ್ರ ಸಮುಚ್ಚಯ ಮುಂತಾದವುಗಳು ನಮ್ಮ ಪ್ರಾಚೀನ ಕಾಲದ ದೇವಾಲಯ ವಾಸ್ತು ಶಿಲ್ಪವನ್ನು ಕುರಿತು ಮಾಹಿತಿ ನೀಡುವ ಶಾಸ್ತ್ರ ಗ್ರಂಥಗಳು ಎಂದು ಹೇಳಬಹುದು.[೨] ಮಯಮತ ಗ್ರಂಥವು ವಾಸ್ತು ಎಂಬ ಶಬ್ದವನ್ನು ಎರಡು ಹಂತಗಳಲ್ಲಿ ವಿವರಿಸಿದೆ. ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ಈ ವಸ್ತುವನ್ನು ಆಶ್ರಯಿಸಿದ್ದು ವಾಸ್ತು ಎಂದೆನಿಸುತ್ತದೆ. ಆದ್ದರಿಂದ ವಾಸ್ತು ಎಂದಲ್ಲಿ ವಸತಿ ಯೋಗ್ಯ ಭೂಮಿ ಮತ್ತು ಆ ಭೂಮಿಯ ಮೇಲೆ ನಿಂತ ಕಟ್ಟಡ ಎರಡನ್ನು ಒಳಗೊಳ್ಳುತ್ತದೆ.[೩] ಗರುಡ ಪುರಾಣದ ಒಂದು ಶ್ಲೋಕವು ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು

ಹೇಳುತ್ತದೆ.[೪] ಆಲಯಗಳನ್ನು ಕಟ್ಟಲು ಬಳಸುವ ಇಟ್ಟಿಗೆ, ಕಲ್ಲು, ಮರ ಹಾಗು ಕಬ್ಬಿಣಗಳನ್ನು ಸಹ ವಿಶ್ವಕರ್ಮ ವಾಸ್ತು ಶಾಸ್ತ್ರದಲ್ಲಿ ವಾಸ್ತುಗಳೆಂದೇ ಕರೆದಿದೆ. ದೇವಾಲಯ ಅರಮನೆ ಅಥವ ರಾಜಗೃಹ, ದೇವತಾ ಮೂರ್ತಿಗಳು ಸರ್ವಜನೋಪಯೋಗಿ ಗೃಹಗಳು, ಬಾವಿ ಪುಷ್ಕರಣಿ, ಮುಂತಾದವುಗಳ ರಚನೆಯನ್ನು ಶುಕ್ರನೀತಿ ಗ್ರಂಥವು ವಾಸ್ತುಶಿಲ್ಪ ಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ. ಒಟ್ಟಾರೆ ವಾಸ್ತುಶಿಲ್ಪವು ನಾಗರೀಕತೆಯನ್ನು ರೂಪಿಸುವ ಮಾತೃಕೆ. ವಾಸ್ತುಶಿಲ್ಪವು ಪ್ರಾಚೀನ ನಾಗರೀಕತೆಗಳಾದ ಈಜಿಪ್ಟ್ ಮೆಸಪಟೋಮಿಯನ್ನರ ಕಾಲದಿಂದಲೇ ಕಂಡು ಬರುತ್ತವೆ. ಅವರು ದೇವಾಲಯಗಳನ್ನು ರಚಿಸಲು ಬೃಹತ್ತಾದಂತಹ ಪಿರಾಮಿಡ್‌ಗಳ ರಚನೆಯನ್ನು ಕಾಣಬಹುದಾಗಿದೆ.[೫]

ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಿಂದಿನ ಹರಪ್ಪ ಮೆಹೆಂಜೋದಾರೋ ಉತ್ಕನನಗಳಲ್ಲಿ ಸಾರ್ವತ್ರಿಕ ಕಟ್ಟಡಗಳು ದೊರೆತರೂ ದೇವಾಲಯಗಳೆನ್ನಬಹುದಾದ ರಚನೆ ಕಂಡು ಬರುವುದಿಲ್ಲ. ಮೆಹೆಂಜೋದಾರೋದ ನಿವೇಶನಗಳ ಉತ್ಖನನಗಳಲ್ಲಿ ದೊರೆತ ಕೆಲವು ಪಳೆಯುಳಿಕೆಗಳಾದ ಮಾತೃದೇವತಾರಾಧನೆ ಪಶುಪತಿ ಮೊದಲಾದ ಮೂರ್ತಿ ಶಿಲ್ಪಗಳು ದೊರೆತಿವೆ. ಆದ್ದರಿಂದ ಮೂರ್ತಿಪೂಜೆ ಆರಾಧನೆ ಆಚರಣೆಯಲ್ಲಿತ್ತೆಂದು ಸರ್‌ಜಾನ್ ಮಾರ್ಷಲ್ ಸ್ಪಷ್ಟಪಡಿಸುತ್ತಾರೆ.[೬] ಇವುಗಳಿಂದ ನಮಗೆ ತಿಳಿದು ಬರುವ ಅಂಶವೆಂದರೆ ದೇವಾಲಗಳ ರಚನೆಗಳ ಪೂರ್ವದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆ ಹಾಗು ಆರಾಧನೆ ಇತ್ತೆಂದು ಹೇಳಬಹುದು.ಇದಕ್ಕೆ ಪುಷ್ಠಿ ನೀಡುವಂತೆ ರಾಮಾಯಣ, ಮಹಾಭಾರತದ ಕಾವ್ಯಗಳಲ್ಲಿ ಉಲ್ಲೇಖಗಳಿವೆ. ಮೂರ್ತಿ ಆರಾಧನೆಯು ಆರಂಭವಾದ ಬಳಿಕ ಅದರ ರಕ್ಷಣೆಗಾಗಿ ವಾಸ್ತುರೂಪ ನೀಡಲಾಯಿತು.

ಭಾರತದ ಚರಿತ್ರೆಯಲ್ಲಿ ದೇಗುಲದ ವಾಸ್ತು ರೂಪಗಳು ದೊರೆಯುವುದು ಭೌದ್ಧ ಮತ್ತು ಜೈನ ಧರ್ಮಗಳು ಅಸ್ಥಿತ್ವಕ್ಕೆ ಬಂದ ನಂತರ ಈ ಧರ್ಮಗಳಿಗಾಗಿ ಸಂಬಂಧಿಸಿದ ಸ್ತೂಪ ಮತ್ತು ಚೈತ್ಯಗಳು ಆರಂಭದ ಧಾರ್ಮಿಕ ಕಟ್ಟಡ ವಾಸ್ತುವಿಗೆ ಸಾಕ್ಷಿಗಳಾಗಿವೆ. ಸ್ತೂಪವು ಬೌದ್ಧಧರ್ಮದ ಒಂದು ಧಾರ್ಮಿಕ ಕಟ್ಟಡ. ಇದನ್ನು ಬೃಹತ್ ಶಿಲಾ ಸಂಸ್ಕೃತಿಯ ಸಮಾಧಿ ಕಲ್ಪನೆಯ ಮುಂದುವರೆದ ಹಂತವಾಗಿರುವುದನ್ನು ಗಮನಿಸಬೇಕು. ಸ್ತೂಪ ಪ್ರಾರಂಭವಾದದ್ದು ಸತ್ತವರ ಶವ ಅಥವಾ ಅಸ್ತಿಗಳ ಮೇಲೆ ನಿರ್ಮಿಸಲಾಗುತ್ತಿದ್ದ ಸಮಾಧಿ ದಿಬ್ಬಗಳಿಂದ.[೭] ಆದರೆ ಸ್ಮಾರಕವಾಗಿ ಭೂಗತ ಮಾಡಿದ ಮೇಲೆ ಕಟ್ಟಿದ ಗೋಲಾಕಾದ ದಿಬ್ಬ. ಈ ಸ್ತೂಪಗಳು ಭಾರತದಲ್ಲಿ ಅಶೋಕನ ಕಾಲಕ್ಕೆ ಹೆಚ್ಚಾಗಿ ನಿರ್ಮಾಣಗೊಂಡಿರುವುದನ್ನು ಕಾಣಬಹುದು. ಸ್ತೂಪದ ಮೂಲ ಉದ್ದೇಶವು ಬುದ್ದನ ಶಾರೀರಿಕ ಅಸ್ತಿ ಅಥವಾ ಭೌದ್ಧ ಧರ್ಮದ ಉಪಾಧ್ಯಾಯ ಬಿಕ್ಷುಗಳ ಅಸ್ತಿಗಳನ್ನು ಸ್ಥಾಪಿಸಿ ಇರಿಸುವುದು. ಅಶೋಕನು ಕಳಿಂಗ ಯುದ್ಧದಲ್ಲಿ ನಡೆದ ರಕ್ತಪಾತವನ್ನು ನೋಡಿ ವಿರಕ್ತಿಯಿಂದ ಭೌದ್ಧದರ್ಮವನ್ನು ಸ್ವೀಕರಿಸಿದ ತರುವಾಯ ಸ್ತಂಭಗಳು, ಸ್ತೂಪಗಳು ಹಾಗು ಗುಹಾಲಯಗಳ ನಿರ್ಮಾಣ ಕಾರ್ಯ ಮಾಡಿದನು. ಸಾಂಚಿ ಹಾಗು ಸಾರನಾಥ, ಈಬಗೆಯ ಸ್ಥೂಪಗಳೇ

ಆಗಿವೆ. ಕಟ್ಟಡಗಳ ರೂಪದ ದೇವಾಲಯಗಳನ್ನು ನಾವು ಹೆಚ್ಚು ಗುಪ್ತರ ಕಾಲದಲ್ಲಿ ನೋಡಬಹುದಾಗಿದೆ. ಇಂತಹ ಪ್ರಾರಂಭದ ದೇವಾಲಯಗಳನ್ನು ಮರ, ಬೊಂಬು, ಮಣ್ಣು ಇಟ್ಟಿಗೆಗಳಿಂದ ನಿರ್ಮಿಸುತ್ತಿದ್ದರು. ನಂತರದ ಕಾಲದಲ್ಲಿ ಶಿಲೆಗಳನ್ನು ಬಳಸಿ ದೇವಾಲಯಗಳನ್ನು ನಿರ್ಮಿಸಲು ಪ್ರಾರಂಭಿಸಿದರು.

ನಂತರ ಶಾತವಾಹನ, ಮೌರ್ಯರ ಕಾಲದ ಕಟ್ಟಡಗಳ ರಚನೆಯು ಕಂಡುಬರುತ್ತದೆ. ಗುಪ್ತರ ಕಾಲದಲ್ಲಿ ನಿರ್ದಿಷ್ಟವಾಗಿ ದೇವಾಲಯ ವಾಸ್ತುವಿನ ರಚನೆ ಕಾಣಬಹುದಾಗಿದೆ. 'ವಾಸ್ತು'ಶಿಲ್ಪವನ್ನು ದೇವಾಲಯಕ್ಕೂ ಹಾಗು 'ಶಿಲ್ಪ' ಎಂಬುದನ್ನು ಮೂರ್ತಿಗಳಿಗೆ ಅನ್ವಯವಾಗುವಂತೆ ಅನುಕ್ರಮದಲ್ಲಿ ಬಳಸುತ್ತಾರೆ. ಈ ವಾಸ್ತುಶಿಲ್ಪವನ್ನು ಅಧ್ಯಯನದ ದೃಷ್ಟಿಯಿಂದ ಗಾರೆಶಿಲ್ಪ , ಲೋಹದ ಶಿಲ್ಪ ಎಂದು ವಿಂಗಡಿಸಲಾಗಿದೆ.

## ೪.೧ ದೇವಾಲಯ ವಾಸ್ತು ಶಿಲ್ಪ

ದೇವಾಲಯಗಳ ಅಧ್ಯಯನವು ಚರಿತ್ರೆಯ ರಚನೆಯಲ್ಲಿ ಮುಖ್ಯವಾದ ಆಕರಗಳಾಗಿ ಕಂಡು ಬರುತ್ತವೆ. ಇವುಗಳು ಕಳೆದುಹೋದ ಘಟನೆಯನ್ನು ಪುನಃ ಕಟ್ಟುವ ಬಹುಮುಖ್ಯ ಸಂಪತ್ತಾಗಿರುತ್ತವೆ. ಒಂದು ದೇಶದ ಸಾಂಸ್ಕೃತಿಕ ಸಂಪತ್ತು ಎನಿಸಿರುವ ದೇವಾಲಯಗಳು ಆ ನಾಡಿನ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ದೇವಾಲಯ ಎಂದರೆ ದೇವರು ಇರುವ ಸ್ಥಳ ಅಥವಾ ಆಲಯ, ಆಲಯ ಎಂದರೆ ಕಟ್ಟಡವೆಂದರ್ಥ. ದೇವರು ಇರುವ ಸ್ಥಾನ, ಜಾಗ ಎಂದರ್ಥ.[೮] ದೇವಾಲಯ ಎಂಬುದು ಧಾರ್ಮಿಕತೆಯ ಶ್ರದ್ಧಾ ಕೇಂದ್ರವಾಗಿದೆ. ಇದಕ್ಕೆ ತನ್ನದೇ ಆದ ಸಂಸ್ಕೃತಿ ಭವ್ಯ ಪರಂಪರೆ ಇದೆ. ದೇವಾಲಯ ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕವಾಗಿದೆ. ಇಂತಹ ದೇವಾಲಯಗಳು ಚರಿತ್ರೆಯ ರಚನೆಯಲ್ಲಿ ಪ್ರಾಮಾಣಿಕವಾದ ಆಕರಗಳಾಗಿ ಬಳಕೆಯಾಗಲ್ಪಡುತ್ತವೆ. ದೇವಾಲಯಗಳ ಉಗಮವು ಕ್ರಿ.ಶಕೆಗೂ ಮುನ್ನವೇ ರಚನೆಯಾಗಿತ್ತೆಂಬುದಾದರೂ ಅವುಗಳ ಸ್ವರೂಪ ವ್ಯಕ್ತವಾಗುವುದಿಲ್ಲ.

ಕ್ರಿ.ಶ. ಮೂರನೇ ಶತಮಾನದಿಂದ ಹಿಡಿದು ಮೈಸೂರಿನ ಒಡೆಯರ ಕಾಲದವರೆಗೆ ಕಲೆ ಮತ್ತು ವಾಸ್ತು ಶಿಲ್ಪದ ಉಗಮ ಮತ್ತು ವಿಕಾಸದ ಹೆಜ್ಜೆಗಳನ್ನು ಗುರ್ತಿಸಬಹುದು. ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಹೊಯ್ಸಳ ಹಾಗು ವಿಜಯನಗರ ಸಾಮ್ರಾಜ್ಯವನ್ನು ಅರಸು ಮನೆತನಗಳು ಪ್ರತ್ಯೇಕ ವಾಸ್ತು ಶೈಲಿಯನ್ನು ಅಳವಡಿಸಿಕೊಂಡು ವಿಪುಲ ಸಂಖ್ಯೆಯಲ್ಲಿ ದೇವಾಲಯಗಳನ್ನು ನಿರ್ಮಿಸಿರುವುದು ಕಾಣಬಹುದಾಗಿದೆ. ಇವರ ಕಾಲದ ದೇವಾಲಯಗಳನ್ನು ನಿರ್ಮಿಸಲು ವಿವಿಧ ಪ್ರದೇಶದಲ್ಲಿ ಲಭ್ಯವಿರುವ ಮರಳು ಶಿಲೆ,ಕಣಶಿಲೆ, ಅಗ್ನಿಶಿಲೆ, ಸುಣ್ಣಶಿಲೆ, ಮೊದಲಾದವುಗಳನ್ನು ಬಳಸಿದರು. ಇವರು ಉತ್ತರದ ನಾಗರ ದಕ್ಷಿಣದ ದ್ರಾವಿಡ ಶೈಲಿಗಳನ್ನು ಮೈಗೂಡಿಸಿಕೊಂಡು ವೇಸರವೆಂಬ ನೂತನ ಶೈಲಿಯನ್ನು ಹುಟ್ಟು ಹಾಕಿದರು.[೯]

"ವಾಸ್ತುಶಿಲ್ಪದಲ್ಲಿ ಕರ್ನಾಟಕದಲ್ಲಿರುವಷ್ಟು ವೈವಿಧ್ಯತೆ ಬಹುಶಃ ಭರತ ಖಂಡದ ಇನ್ನಾವ ಭಾಗದಲ್ಲೂ ಇಲ್ಲವೆನ್ನಬಹುದು. ದೇವಾಲಯಗಳ ನಿರ್ಮಾಣದಲ್ಲಿ ಕರ್ನಾಟಕ ತೋರಿಸಿದ ಉದಾತ್ತವಾದ ಅಭಿರುಚಿ ವಿಶಿಷ್ಟವಾದದ್ದು, ಭರತ ಖಂಡದ ಎಲ್ಲಾ ಭಾಗಗಳ ಉತ್ತಮ ಅಂಶಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳಲು ಕರ್ನಾಟಕ ಪ್ರಯತ್ನ ಪಟ್ಟಿದೆ. ಅವುಗಳ ಸಮನ್ವಯದಿಂದ ತನ್ನದೇ ಆದ ಮಾರ್ಗವನ್ನು ರೂಪಿಸಿಕೊಂಡಿದೆ. [೧೦]

ಚನ್ನರಾಯನದುರ್ಗ ಪರಿಸರದ ದೇವಾಲಯಗಳಲ್ಲಿ ಶೈವ ಹಾಗು ವೈಷ್ಣವ ಪಂಥದ ದೇವಾಲಯಗಳೇ ಹೆಚ್ಚು ಕಂಡು ಬರುತ್ತವೆ. ಈ ಪರಿಸರದ ಪ್ರಮುಖ ದೇವಾಲಯಗಳನ್ನು ಈ ಕೆಳಕಂಡಂತೆ ನೋಡಬಹುದು.

**ಚನ್ನಕೇಶವ ದೇವಾಲಯ**

ಚನ್ನಕೇಶವ ದೇವಾಲಯವನ್ನು ಚನ್ನರಾಯನ ದುರ್ಗದ ೨ ನೇ ಸುತ್ತಿನ ಕೋಟೆಯೊಳಗೆ ನಿರ್ಮಿಸಲಾಗಿದೆ. ಈ ದೇವಾಲಯವು ಪ್ರಾಚೀನವಾಗಿದ್ದು, ಮಧುಗಿರಿ ಪಾಳೆಗಾರನಾದ ಚಿಕ್ಕಪ್ಪಗೌಡನು ತನ್ನ ಕಿರಿಯ ಮಗನ ಅಕಾಲಿಕ ಮರಣದ ನೆನಪಿಗಾಗಿ ಕೋಟೆ ಕಟ್ಟಿಸಿ ಚನ್ನಕೇಶವ ದೇವಾಲಯವನ್ನು ನಿರ್ಮಿಸಿದನು.[೧೧] ಈ ದೇವಾಲಯ ಪೂರ್ವಾಭಿಮುಖವಾಗಿದ್ದು, ಗರ್ಭಗುಡಿ ಸುಖನಾಸಿ, ಮುಖ ಮಂಟಪವನ್ನು ಒಳಗೊಂಡಿದೆ. ಈ ದೇವಾಲಯದ ನಿರ್ಮಾಣದಲ್ಲಿ ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಯನ್ನು ಬಳಸಲಾಗಿದೆ. ಈ ದೇವಾಲಯವನ್ನು ಪ್ರವೇಶಿಸಲು ಉತ್ತರದ ಕಡೆಯಿಂದ ಮುಖ್ಯದ್ವಾರ ಒಳಗೊಂಡಿದೆ. ಈ ದ್ವಾರಕ್ಕೆ ಮಧ್ಯಮ ಗಾತ್ರದ ಕಲ್ಲುಗಳನ್ನು ಬಳಸಿ ನಿರ್ಮಿಸಿದ್ದು, ದ್ವಾರದ ಕಂಬವು ಯಾವುದೇ ಕೆತ್ತನೆಗೆ ಒಳಪಡದೆ ಚೌಕಕಾರದಲ್ಲಿದೆ.

ಗರ್ಭಗೃಹವು ಚೌಕಕಾರದಲ್ಲಿ ನಿರ್ಮಾಣವಾಗಿದ್ದು, ಮೇಲ್ಚಾವಣಿಯನ್ನು ಮಧ್ಯಮಗಾತ್ರದ ಚಪ್ಪಡಿಗಳನ್ನು ಹಾಕಿ ಗಾರೆಯಿಂದ ಭದ್ರಪಡಿಸಲಾಗಿದೆ. ಗರ್ಭಗೃಹದಲ್ಲಿ ಮೂರ್ತಿಯು ಕಂಡು ಬಂದಿಲ್ಲ. ಮೂರ್ತಿಯ ಅವಶೇಷಗಳು ಪಕ್ಕದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಮಯದಲ್ಲಿ ದೊರೆತಿದೆ. ಇದು ಸುಮಾರು ೨ ಅಡಿ ಉದ್ದವಿದ್ದು ಕಪ್ಪು ಬಣ್ಣದ ಬಳಪದ ಕಲ್ಲಿನಿಂದ ನಿರ್ಮಿಸಲಾಗಿದೆ. ಈ ಮೂರ್ತಿಯು ತನ್ನ ಎರಡು ಕೈಗಳಲ್ಲಿ ಶಂಕು ಮತ್ತು ಚಕ್ರವನ್ನು ಹಿಡಿದು ನಿಲ್ಲಲಾಗಿದ್ದು, ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ. ಇನ್ನುಳಿದ ಶಿಲ್ಪದ ಭಾಗಗಳು ಕಾಣದೇ ನಾಶಗೊಳಿಸಲಾಗಿದೆ. ಈ ದೇವಾಲಯದಲ್ಲಿ ಇಂದು ಪೂಜೆ ನಡೆಯದೆ ನಶಿಸಿ ಹೋಗಿದೆ. ಇದು ಪ್ರದಕ್ಷಣಾ ಪಥ ಹೊಂದಿಲ್ಲ. ಸುಖನಾಸಿಯು ಗರ್ಭಗೃಹಕ್ಕಿಂತ ವಿಸ್ತೀರ್ಣದಲ್ಲಿ ದೊಡ್ಡದಾಗಿದೆ. ಇಲ್ಲಿ ಭುವನೇಶ್ವರಿಯನ್ನು ನಿರ್ಮಿಸಿದ್ದು , ಎರಡು ಹಂತದಲ್ಲಿ ಒಳಸರಿದಂತೆ ಚೌಕಾಕಾರದಲ್ಲಿದ್ದು ಅರಳಿದ ಪುಷ್ಪದಂತೆ ಕೆತ್ತಲಾಗಿದೆ. ಸುಖನಾಸಿಯ ಎಡ ಮತ್ತು ಬಲಭಾಗದ ಬಾಗಿಲು

ವಾಡದಲ್ಲಿ ದ್ವಾರಪಾಲಕರ ಶಿಲ್ಪಗಳನ್ನು ಕೆತ್ತಲಾಗಿದೆ. ಈ ದ್ವಾರಪಾಲಕರ ಶಿಲ್ಪವು ತನ್ನ ಎಡ ಮತ್ತು ಬಲಗೈಗಳಲ್ಲಿ ಶಂಕು ಮತ್ತು ಚಕ್ರವನ್ನು ಹಿಡಿದು ನಿಂತಿದ್ದು, ಕಿರೀಟ ಕೈಕಡಗ, ಶಲ್ಯ , ಕೈಬಳೆ, ತೋಳುಬಂದಿ ಕೊರಳಹಾರ, ಕಾಲ್ಕಡಗ ಕರ್ಣಕುಂಡಲವನ್ನು ಧರಿಸಿದಂತೆ ಖಂಡರಿಸಲಾಗಿದೆ. ಈ ಮೂರ್ತಿಗಳು ಒಂದೆ ತೆರನಾಗಿದ್ದು ಬಲಭಾಗದ ಮೂರ್ತಿಯು ತನ್ನ ದೇಹದ ಭಾರವನ್ನು ಎಡಗಾಲಿನ ಮೇಲೆ ಬಿಟ್ಟು, ಬಲಗಾಲನ್ನು ಮಡಿಚಿ ತನ್ನ ಎಡಗೈನಿಂದ ಗಧೆಯನ್ನು ನೆಲಕ್ಕೆ ಊರಿ ತನ್ನ ಬಲಗೈಯನ್ನು ಸೊಂಟದ ಮೇಲೆ ಇಟ್ಟುನಿಂತ ರೀತಿ ಖಂಡರಿಸಲಾಗಿದೆ.

ಸುಖನಾಸಿಯ ಬಾಗಿಲು ವಾಡದಲ್ಲಿ ಲಲಾಟ ಬಿಂಬವಿದ್ದು, ಇದು ೨ ಅಡಿ ಉದ್ದ ೧ ೧/೨ ಅಡಿ ಅಗಲದ ಗಜಲಕ್ಷ್ಮಿ ಶಿಲ್ಪವನ್ನು ಕಾಣಬಹುದು. ಇದರ ಕೆತ್ತನೆಯಲ್ಲಿ ಎಡ ಮತ್ತು ಬಲಭಾಗದಲ್ಲಿ ಆನೆಗಳು ಪ್ರೀತಿಯಿಂದ ಸೊಂಡಲಿನ ಮೂಲಕ ಹಾರವನ್ನು ಹಾಕುತ್ತಿರುವ ರೀತಿ ಖಂಡರಿಸಲಾಗಿದೆ. ಲಕ್ಷ್ಮಿ ಶಿಲ್ಪವು ಕಿರೀಟ ಹೊಂದಿದ್ದು, ತನ್ನ ಕೈಯಲ್ಲಿ ಅರಳಿದ ಪದ್ಮ ಹಿಡಿದು ಕುಳಿತುಕೊಂಡಂತೆ ಕೆತ್ತಲಾಗಿದೆ. ಸುಖನಾಸಿಯ ಎಡ ಮತ್ತು ಬಲಭಾಗದ ಗೋಡೆಯನ್ನು ಇಟ್ಟಿಗೆಯಿಂದ ನಿರ್ಮಿಸಲಾಗಿದ್ದು ಇಟ್ಟಿಗೆಯು ೨೧ x ೧೯ x ೧೪ ಸೆಂ.ಮೀ. ಸುತ್ತಳತೆ ಹೊಂದಿದೆ.

ಈ ದೇವಾಲಯ ನವರಂಗ ಮಂಟಪ ಹೊಂದಿದ್ದು, ಅಂತರಾಳದ ಮುಂದುವರೆದ ಭಾಗವಾಗಿದೆ. ಇದು ಗರ್ಭಗುಡಿ ಮತ್ತು ಅಂತರಾಳಕ್ಕಿಂತ ಹೆಚ್ಚು ವಿಶಾಲವಾಗಿರುವುದನ್ನು ಕಾಣಬಹುದಾಗಿದೆ. ತೆರೆದ ಮಂಟಪದಲ್ಲಿ ನಾಲ್ಕು ಸಾಲುಗಳ ಮೂರು ಕಂಬಗಳನ್ನು ಕಾಣಬಹುದಾಗಿದೆ. ಈ ಕಂಬದಲ್ಲಿ ಸಾಧಾರಣ ಕೆತ್ತನೆ ಕಂಡು ಬಂದಿದ್ದು, ಕಂಬಗಳ ರಚನೆಯಲ್ಲಿ ಪೀಠ, ಖಂಡಭಾಗದಲ್ಲಿ ಚೌಕಾಕಾರ ಹೊಂದಿದ್ದು, ನಂತರದಲ್ಲಿ ಅಷ್ಟಕೋನ ಪಟ್ಟಿಯನ್ನು ಕೆತ್ತಲಾಗಿದೆ. ನಂತರ ಸಾಧಾರಣ ಬೋಧಿಗೆಯನ್ನು ಕಾಣಬಹುದು. ಮುಖ ಮಂಟಪದ ಕಂಬಗಳಲ್ಲಿ ಪೂರ್ಣ ಕುಂಭವನ್ನು ಕೆತ್ತಲಾಗಿದೆ. ಮುಖಮಂಪಟಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ೨ ಗೂಡು ಮಾಡಲಾಗಿದ್ದು, ೩ ಅಡಿ ಉತ್ತರ ೨ ೧/೨ ಅಗಲ ಹೊಂದಿದ ಗುಮ್ಮಟಾಕಾರದ ರೀತಿಯಲ್ಲಿರುವ ಪ್ರಬಾವಳಿಯಲ್ಲಿ ಶಂಕರಾಚಾರ್ಯರನ್ನು ಕೆತ್ತಲಾಗಿದ್ದು, ಇದರಲ್ಲಿ ಧ್ವಜ ಹಿಡಿದು ಕೈ ಮುಗಿಯುವ ರೀತಿ ಖಂಡರಿಸಲಾಗಿದೆ. ಹಾಗೆ ಮುಂದೆ ಸಾಗಿದರೆ ಉತ್ತರದ ಕಡೆಗೆ ಮುಖ್ಯದ್ವಾರವನ್ನು ಕಾಣಬಹುದು. ಈ ದ್ವಾರವು ಸುಮಾರು ೯ ಅಡಿ ಎತ್ತರವನ್ನು ಒಳಗೊಂಡಿದೆ. ದ್ವಾರದ ಬಳಿ ಕುಳಿತುಕೊಳ್ಳಲು ಕಕ್ಷಾಸನವಿದೆ. ಈ ದೇವಾಲಯವನ್ನು ೪ ಅಡಿ ಎತ್ತರದ ಪೀಠದ ಮೇಲೆ ನಿರ್ಮಿಸಲಾಗಿದ್ದು, ದೇವಾಲಯಕ್ಕೆ ಪೂಜೆ ನಡೆಯುತ್ತಿಲ್ಲ.

## ನಂದೀಶ್ವರ ದೇವಾಲಯ

ನಂದೀಶ್ವರ ದೇವಾಲಯವು ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ. ಇದು ಕೊರಟಗೆರೆಯಿಂದ ೫ ಕಿ.ಮೀ. ದೂರದಲ್ಲಿರುವ ತುಂಬಾಡಿಯ ಹಳೆಕೆರೆಯ ಸಮೀಪದಲ್ಲಿ ನಿರ್ಮಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ, ಗ್ರಾಮವನ್ನು ನಿರ್ಮಿಸಿ ಅದಕ್ಕೆ ಚೋಳರ ಪಾಳ್ಯ ಎಂದು ಕರೆಯಲಾಗುತ್ತಿದೆ. ಈ ದೇವಾಲಯಕ್ಕೆ ಪೂರ್ವಾಭಿಮುಖವಾಗಿ ಗರ್ಭಗುಡಿಯಿದ್ದು, ಗ್ರಾನೈಟ್ ಶಿಲೆಯಿಂದ ನಿರ್ಮಾಣ ಮಾಡಲಾಗಿದೆ. ಇದು, ಕ್ರಿ.ಶ. ೧೬-೧೭ನೇ ಶತಮಾನದ್ದಾಗಿದ್ದು ವಿಜಯನಗರೋತ್ತರ . ಕಾಲದ ಕದಂಬ ನಾಗರ ಶೈಲಿಯನ್ನು ಒಳಗೊಂಡಿದೆ. ದೇವಾಲಯದ ವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ರಂಗಮಂಟಪವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಸುಮಾರು ೩ ಅಡಿ ಎತ್ತರದ ಶಿವಲಿಂಗ ಇದೆ. ಲಿಂಗದ ತಳಭಾಗದಲ್ಲಿ ವಿಜಯನಗರದ ಶೈಲಿಯ ಸಿಂಹಗಳನ್ನು ಎಡ ಮತ್ತು ಬಲಭಾಗದಲ್ಲಿ ಕೆತ್ತಲಾಗಿದೆ. ಈ ಸಿಂಹಗಳು ನಿಂತು ನೋಡುವ ರೀತಿಯಲ್ಲಿವೆ. ಇದರ ಮೇಲ್ಭಾಗದಲ್ಲಿ ೨ ೧/೨ ಅಡಿ ಎತ್ತರದ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.

ಅಂತರಾಳವು ಗರ್ಭಗೃಹಕ್ಕಿಂತ ವಿಶಾಲವಾಗಿದ್ದು , ಭುವನೇಶ್ವರಿಯನ್ನು ಹೊಂದಿದೆ. ಭುವನೇಶ್ವರಿಯು ಚೌಕಾಕಾರದಲ್ಲಿದ್ದು ಛಾವಣಿಯ ಒಳಸೇರಿದಂತೆ ಅರಳಿದ ಪದ್ಮವನ್ನು ಸಾಧಾರಣಾ ಕೆತ್ತನೆಯಲ್ಲಿ ನಿರ್ಮಿಸಲಾಗಿದೆ. ಅಂತರಾಳ ನಾಲ್ಕು ಅರ್ಧಗಂಭಗಳನ್ನು ಒಳಗೊಂಡಿದ್ದು ಯಾವುದೇ ಕೆತ್ತನೆ ಇಲ್ಲ ಆದರೆ ಸರಳ ಬೋಧಿಗೆಯನ್ನು ಕಾಣಬಹುದಾಗಿದೆ. ಅಂತರಾಳದ ಮಧ್ಯಭಾಗದಲ್ಲಿ ನಂದಿ ಶಿಲ್ಪ ಇದ್ದು ಕೊರಳಿಗೆ ಗಂಟೆಮಾಲೆ, ಕಾಲುಕಡಗ, ಬೆನ್ನಿಗೆ ಸರಪಳಿಯನ್ನು ಅಲಂಕೃತಗೊಳಿಸಲಾಗಿದ್ದು, ತನ್ನ ಎಡಗಾಲನ್ನು ಮಡಿಚಿ ಬಲಭಾಗಲನ್ನು ನೀಚಲಾಗಿದೆ. ತನ್ನ ಎರಡು ಕಿವಿಗಳನ್ನು ನಿರ್ಮಿಸಿದ್ದು ಕೊಂಬುಗಳ ಕೆತ್ತನೆ ಕಂಡು ಬಂದಿಲ್ಲ.

ಈ ದೇವಾಲಯವು ೯ ಅಡಿ ಎತ್ತರ ೧೫ ಅಡಿ ಉದ್ದವನ್ನು ಒಳಗೊಂಡಿದೆ. ಇದರ ಶಿಖರವು ಕದಂಬ ನಾಗರಶೈಲಿಯನ್ನು ಒಳಗೊಂಡಿದ್ದು, ಶಿಖರವು ಚೌಕಾಕಾರದಲ್ಲಿ ಮೇಲೋದಂತೆ ತನ್ನ ವಿಸ್ತೀರ್ಣ ಕಡಿಮೆಗೊಂಡು ೧೨ ಹಂತಗಳನ್ನು ಒಳಗೊಂಡಿದೆ. ದೇವಾಲಯದ ಬಿತ್ತಿ ಹಿಂಚಾಚು ಮುಂಚಾಚುಗಳಿಂದ ಕೂಡಿದ್ದು ಕುಂಡ್ಯ ಸ್ತಂಭಗಳಿಂದ ಆಗಿದೆ. ಒಟ್ಟನಲ್ಲಿ ಈ ದೇವಾಲಯ ವಿಜಯನಗರೋತ್ತರ ಕಾಲದ ಪಾಳೆಗಾರರ ಕಾಲದಲ್ಲಿ ನಿರ್ಮಾಣವಾಗಿದೆ ಎಂದೇಳಬಹುದು.

## ಜುಂಜುರಾಮನಹಳ್ಳಿಯ ಮಲ್ಲೇಶ್ವರ ದೇವಾಲಯ

ಈ ದೇವಾಲಯವು ಕೊರಟಗೆರೆಯಿಂದ ೯ ಕಿ.ಮೀ. ದೂರದಲ್ಲಿದ್ದು ತೋವಿನಕೆರೆ ಮಾರ್ಗವಾಗಿ ಚಲಿಸುವಾಗ ಕಂಡು ಬರುತ್ತದೆ. ಪ್ರಸ್ತುತ ದೇವಾಲಯವು ಕೊರಟಗೆರೆ ತಾಲ್ಲೂಕಿನ ಜುಂಜರಾಯನಹಳ್ಳಿಯಲ್ಲಿ ಕಂಡು ಬಂದಿದ್ದು, ಕದಂಬ ನಾಗರ ಶೈಲಿಯಿಂದ ಕೂಡಿದೆ. ಈ ದೇವಾಲಯವು ಜೀರ್ಣೋದ್ಧಾರವಾಗಿದ್ದು, ಇಂದಿಗೂ ಮಲ್ಲೇಶ್ವರ ಮೂರ್ತಿಯನ್ನು ಪೂಜಿಸಲಾಗುತ್ತಿದೆ. ಇದು ಗರ್ಭಗೃಹ,

ಅಂತರಾಳ ರಂಗಮಂಟಪ ಮತ್ತು ತೆರೆದ ಮಂಟಪವನ್ನು ಹೊಂದಿದೆ. ಗರ್ಭಗೃಹವು ಚೌಕಾಕಾರದಲ್ಲಿದ್ದು ಉದ್ಭವ ಮೂರ್ತಿಯಾದ ಮಲ್ಲೇಶ್ವರನನ್ನು ಪೂಜಿಸಲಾಗುತ್ತದೆ. ಈ ದೇವಾಲಯವನ್ನು ಪೂರ್ಣವಾಗಿ ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ.

ಗರ್ಭಗೃಹದ ಬಾಗಿಲವಾಡದಲ್ಲಿ ದ್ವಾರಪಾಲಕರ ಶಿಲ್ಪಗಳನ್ನು ಕಾಣಬಹುದು. ಈ ಶಿಲ್ಪಗಳು ಒಂದೇ ರೀತಿಯಲ್ಲಿದ್ದು, ದೇಹದ ಬಾರವನ್ನು ಎಡಭಾಗದ ಕಾಲಿನ ಮೇಲೆ ಬಿಟ್ಟು ಬಲಗಾಲನ್ನು ಮಡಿಚಿ, ಗದೆಯನ್ನು ನೆಲಕ್ಕೆ ಊರಿ ನಿಂತಿರುವಂತೆ ಖಂಡರಿಸಲಾಗಿದೆ. ಸುಖನಾಸಿಯು ಗರ್ಭಗುಡಿಗಿಂತ ವಿಶಾಲವಾಗಿದ್ದು ೪ ಕಂಬಗಳನ್ನು ಒಳಗೊಂಢಿದೆ. ಇದು ೫ ೧/೨ ಅಡಿ ಎತ್ತರ ಹೊಂದಿ ಛಾವಣಿಯನ್ನು ಹೊತ್ತು ನಿಂತಿವೆ. ಕಂಬಗಳು ಪೀಠವನ್ನು ಹೊಂದಿ ಚೌಕಾಕಾರವಾಗಿದ್ದು ೪ ಅಂತಗಳಲ್ಲಿ ಕೆತ್ತಲಾಗಿದೆ. ಮೊದಲ ಹಂತ ಚೌಕಾಕಾರದಲ್ಲಿದ್ದು ೨ ನೇ ಹಂತವು ವೃತ್ತಾಕಾರದಲ್ಲಿ ಕೆತ್ತಲಾಗಿ, ೧೨ ಕೋನಗಳು ೩ ಅಡ್ಡ ಪಟ್ಟಿಯನ್ನು ಒಳಗೊಂಡಂತೆ ನಂತರದಲ್ಲಿ ೩ ನೇ ಭಾಗವು ಚೌಕಾಕಾರವಾಗಿದ್ದು, ನಾಲ್ಕು ಪಾಶ್ವಗಳಲ್ಲಿ ಚಿತ್ರವನ್ನು ಕೆತ್ತಲಾಗಿದೆ. ೪ ನೇ ಹಂತವು ಕುಂಬದ ರೀತಿಯಲ್ಲಿ ಕೆತ್ತಲಾಗಿದ್ದು , ನಂತರ ೪ ಮುಖ ಹೊಂದಿದ ಬೋಧಿಗೆ ಹೊಂದಿ ಛಾವಣಿಯನ್ನು ಹೊತ್ತು ನಿಂತಿದೆ.

ಈ ದೇವಾಲಯ ಪ್ರದಕ್ಷಣಾಪಥ ಹೊಂದಿದ್ದು ಸುತ್ತಲು ಪ್ರಕಾರ ಗೋಡೆಯನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಈ ದೇವಾಲಯದ ವಿಸ್ತೀರ್ಣವು ೧೧ ಅಡಿ ಉದ್ದ ೬ ಅಡಿ ಅಗಲ ಒಳಗೊಂಡಿದ್ದು , ಅಧಿಷ್ಠಾನ ಮತ್ತು ಬಿತ್ತಿಯಲ್ಲಿ ಯಾವುದೇ ರೀತಿಯ ಶಿಲ್ಪಗಳ ಕೆತ್ತನೆ ಕಂಡು ಬಂದಿಲ್ಲ. ಗರ್ಭಗುಡಿಯ ಮೇಲ್ಬಾಗದಲ್ಲಿ ಅದಕ್ಕೆ ಹೊಂದಿಕೊಂಡಂತೆ ಶಿಖರವನ್ನು ನಿರ್ಮಿಸಿದ್ದು ಇದರ ರಚನೆ ಕದಂಬ ನಾಗರ ಶೈಲಿಯಲ್ಲಿದೆ. ಮೇಲ್ಬಾಗದಲ್ಲಿ ಗಾರೆಯಿಂದ ನಿರ್ಮಿಸಿದ ನಂದಿ, ನವಿಲು ಹಾಗು ವಿಘ್ನೇಶ್ವರನ ಶಿಲ್ಪಗಳನ್ನು ಇತ್ತಿಚೆಗೆ ನಿರ್ಮಿಸಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಸುಮಾರು ೮ ಅಡಿ ಎತ್ತರದ ದೀಪಸ್ಥಂಭ ನಿಲ್ಲಿಸಲಾಗಿದ್ದು, ಹಬ್ಬ ಹರಿದಿನಗಳಲ್ಲಿ ದೀಪ ಹಚ್ಚುತ್ತಾರೆ. ಈ ದೇವಾಲಯದ ೩೦ ಅಡಿ ದೂರದಲ್ಲಿ ಚೋಳರಾಜನು ಕೈ ಮುಗಿಯುತ್ತಿರುವ ಶಿಲ್ಪವನ್ನು ಗರ್ಭಗುಡಿಗೆ ಎದುರಾಗಿ ಕೆತ್ತಲಾಗಿದೆ. ಈ ಶಿಲ್ಪ ಕಿರೀಟ ಧರಿಸಿದ್ದ ಅಲಂಕಾರ ಪ್ರಿಯನಾಗಿದ್ದಾನೆ . ಈ ಶಿಲ್ಪದ ಪಕ್ಕದಲ್ಲೆ ವೀರನ ಶಿಲ್ಪವನ್ನು ಕಾಣಬಹುದಾಗಿದೆ.

**ಕೊರಟಗೆರೆಯ ಗವಿಗಂಗಾಧರೇಶ್ವರ ದೇವಾಲಯ**

ಹೊಳವನಹಳ್ಳಿಯಲ್ಲಿ ಆಳ್ವಿಕೆ ನಡೆಸುತ್ತಿದ್ದ ರಣಭೈರೇಗೌಡ ಎಂಬ ಪಾಳೆಗಾರನು ಕೊರಟಗೆರೆ ಬೆಟ್ಟದಲ್ಲಿ ಕೋಟೆ ನಿರ್ಮಿಸಿ, ಗವಿಗಂಗಾಧರೇಶ್ವರ ದೇವಾಲಯವನ್ನು ನಿರ್ಮಿಸಿದನು. ಈ ದೇವಾಲಯಕ್ಕೆ ಇಂದಿಗೂ ಪೂಜೆ ನಡೆಯುತ್ತಿದೆ. ಹೆಸರೇ ಸೂಚಿಸುವಂತೆ ಗಂಗಾಧರೇಶ್ವರ ದೇವಾಲಯದ ಗರ್ಭ ಗುಡಿಯು ಸ್ವಾಭಾವಿಕ ಕಲ್ಲಿನಿಂದ ನಿರ್ಮಾಣವಾಗಿದ್ದು, ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯದ

ಗರ್ಭಗುಡಿಯು ಚೌಕಾಕಾರವಾಗಿದ್ದು ಜೀರ್ಣೋದ್ಧಾರಗೊಂಡಿದೆ. ಶಿವಲಿಂಗದ ಮುಂಭಾಗದಲ್ಲಿ ನಂದಿ ವಿಗ್ರಹವನ್ನು ಇಡಲಾಗಿದ್ದು ೧ ೧/೨ ಅಡಿ ಎತ್ತರ ಒಳಗೊಂಡಿದೆ. ಗರ್ಭಗುಡಿಯ ದ್ವಾರದಲ್ಲಿನ ಶೈವ ದ್ವಾರ ಪಾಲಕರ ಶಿಲ್ಪಗಳನ್ನು ಖಂಡರಿಸಲಾಗಿದೆ. ಈ ಶಿಲ್ಪಗಳು ಒಂದೇ ರೀತಿಯ ಕೆತ್ತನೆ ಇದ್ದು, ಎಡ ಭಾಗದ ಶಿಲ್ಪವು ತನ್ನ ಎರಡು ಕೈಗಳಲ್ಲಿ ಡಮರುಗ ತ್ರಿಶೂಲ ಹಿಡಿದು ನಿಂತಿದ್ದು, ಸರ್ಪದ ಮೇಲೆ ತನ್ನ ಕಾಲುಗಳನು ಇಟ್ಟು ಬಲಗಾಲಿನ ಮೇಲೆ ದೇಹದ ಭಾರ ಬಿಟ್ಟು ಎಡಗಾಲನ್ನು ಮಡಿಚಿ ಗದೆಯನ್ನು ಬಲಗೈನಿಂದ ಹಿಡಿದು ನೆಲಕ್ಕೂರಿ ನಿಂತಂತೆ ಕೆತ್ತಲಾಗಿದೆ.

ಅಂತರಾಳವು ಗರ್ಭಗೃಹಕ್ಕಿಂತ ವಿಶಾಲವಾಗಿದ್ದು ೬ ಕಂಬಗಳಿಂದ ಕೂಡಿದೆ. ಪ್ರತಿ ಕಂಬಗಳು ೩ ಹಂತದಲ್ಲಿ ಕೆತ್ತನೆಯಾಗಿದ್ದು, ಚೌಕಾಕಾರದಲ್ಲಿವೆ. ಕಂಬಗಳು ೪ ಮುಖಗಳನ್ನು ಹೊಂದಿದ್ದು , ಪ್ರತಿ ಮುಖದಲ್ಲಿಯೂ ನಂದಿ ವಿಗ್ರಹ ಕಪಿ, ಕೂರ್ಮ , ಪುಷ್ಪ, ಸ್ತ್ರೀಯು ಮೊಣಕಾಲೂರಿ ಕುಳಿತ ಶಿಲ್ಪ , ಪೂರ್ಣ ಕುಂಭದ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಕಂಬಗಳು ಭೋದಿಗೆಯನ್ನು ಹೊಂದಿ ಛಾವಣಿಯನ್ನು ಹೊತ್ತು ನಿಂತಿವೆ. ಗಂಗಾಧರೇಶ್ವನ ಗರ್ಭಗುಡಿಗೆ ಸಮಾನಾಂತರವಾಗಿ ಎಡಭಾಗಕ್ಕೆ ೨ ನಾಗರ ಶಿಲ್ಪಗಳನ್ನಿಟ್ಟು ಪ್ರತ್ಯೇಕ ಗರ್ಭಗುಡಿ ನಿರ್ಮಿಸಲಾಗಿದೆ. ಅಂದರೆ ಒಟ್ಟು ೨ ಗರ್ಭ ಗುಡಿ ಹೊಂದಿವೆ. ಇದಕ್ಕೆ ನೇರವಾಗಿ ನವಗ್ರಹ ಮಂಟಪವನ್ನು ಕಾಣಬಹುದು. ಇಲ್ಲಿ ನವಗ್ರಹದ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿಲ್ಪಗಳು ೪ ಅಡಿ ವೇದಿಕೆಯ ಮೇಲ್ಭಾಗದಲ್ಲಿ ಪ್ರತಿಷ್ಠಾಪಿಸಲಾಗಿದೆ. 

ತೆರೆದ ಮಂಟಪದಲ್ಲಿ ೫ ೧/೨ ಅಡಿ ಎತ್ತರದ ದೀಪ ಸ್ಥಂಭವು ಅಧಿಷ್ಠಾನದ ಮೇಲೆ ನಿಲ್ಲಿಸಲಾಗಿದೆ. ಈ ಕಂಬವು ಚೌಕಾಕಾರದಲ್ಲಿದ್ದು, ಸರಳ ಕೆತ್ತನೆಯಿಂದ ಕೂಡಿದೆ. ಇದರ ಬೋಧಿಗೆಯು ಸರಳವಾಗಿದೆ. ದೀಪಸ್ಥಂಭದ ಮುಂಭಾಗ ನಂದಿ ವಿಗ್ರಹವಿದ್ದು ೩ ಅಡಿ ಎತ್ತರ ೩ ಅಡಿ ಅಗಲ ಹೊಂದಿದ್ದು , ಸಾಧಾರಣ ಅಲಂಕಾರ ಹೊಂದಿದೆ. ತೆರೆದ ಮಂಟಪವು ೪ ಕಂಬಗಳನ್ನು ಹೊಂದಿದ್ದು ಸರಳ ಕೆತ್ತನೆಯಿಂದ ಕೂಡಿದ್ದು ಚೌಕಾಕಾರದಲ್ಲಿದ್ದು ಬೋದಿಗೆಯು ಅರಳಿದ ಪುಷ್ಪ ಕೆಳಮುಖ ಮಾಡಿ ನೋಡುವ ರೀತಿಯಲ್ಲಿದೆ.

ಗರ್ಭಗೃಹದ ಛಾವಣಿಯ ಮೇಲ್ಭಾಗದಲ್ಲಿ ಗಾರೆಯಿಂದ ನಿರ್ಮಿಸಿದ ಗೋಪುರವನ್ನು ಕಾಣಬಹುದು. ಈ ಗೋಪುರ ೪ ಹಂತವನ್ನು ಒಳಗೊಂಡು , ೪ ಕೋಷ್ಠಕ ಹೊಂದಿದ್ದು ಯಾವುದೇ ಶಿಲ್ಪಗಳು ಒಳಗೊಂಡಿಲ್ಲ. ಮೇಲೆ ಹೋದಂತೆ ಶಿಖರದ ಮಾದರಿಯಲ್ಲಿ ಮೇಲೇರಿದೆ. ದೇವಾಲಯದ ಮುಖ್ಯದ್ವಾರದಲ್ಲಿ ದ್ವಾರಪಾಲಕರ ಶಿಲ್ಪ ಹೊಂದಿದ್ದು, ಅದರ ಮೇಲ್ಭಾಗ ದೊಡ್ಡದಾದ ೬ ಅಡಿ ಎತ್ತರ ಹೊಂದಿದ ನಂದಿವಿಗ್ರಹ ಗಾರೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯದ ಮುಖ್ಯ ದ್ವಾರದಲ್ಲೇ ಎರಡು ಕೊಠಡಿಗಳನ್ನು ಹೊಂದಿದ್ದು ಭಕ್ತಾದಿಗಳು ಉಳಿದುಕೊಳ್ಳುವಂತೆ ನಿರ್ಮಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಸ್ವಾಭಾವಿಕ ದೊಣೆಯಿದ್ದು ಭಕ್ತರಿಗೆ ನೆರವಾಗುವಂತೆ ನಿರ್ಮಿಸಲಾಗಿದೆ.

**ಕೋಟೆ ವೆಂಕಟರಮಣ ದೇವಾಲಯ**

ಇದು ಪಾಳೆಗಾರರ ಕಾಲದಲ್ಲಿ ನಿರ್ಮಾಣವಾದ ಐತಿಹಾಸಿಕ ದೇವಾಲಯವಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಶಿಲಾ ಶಾಸನ ದೊರೆತ್ತಿದ್ದು, ಇದರ ಪ್ರಕಾರ ಭಾನುವಾರದಂದು ಮುಮ್ಮಡಿ ರಣ ಭೈರೇಗೌಡ ನಿರ್ಮಿಸಿದನೆಂದು ತಿಳಿಸಲಾಗಿದೆ. ಈ ದೇವಾಲಯವನ್ನು ಮಧ್ಯಮ ಗಾತ್ರದ ಕಲ್ಲುಗಳಿಂದ ನಿರ್ಮಿಸಿದ್ದು, ೪ ಅಡಿ ಜಗತಿಯ ಮೇಲ್ಭಾಗದಲ್ಲಿ ನಿರ್ಮಾಣ ಮಾಡಲಾಗಿದೆ. ಇದರ ಎದುರಿಗೆ ದೀಪ ಸ್ಥಂಭ ನಿರ್ಮಿಸಿದ್ದಾರೆ. ಈ ದೇವಾಲಯವು ತೆರೆದ ಪ್ರದಕ್ಷಣಾ ಪಥವನ್ನು ಹೊಂದಿದೆ.

ಗರ್ಭಗುಡಿಯು ಚೌಕಾಕಾರದ ರಚನೆಯನ್ನು ಹೊಂದಿದ್ದು ೨ ೧/೨ ಅಡಿ ಎತ್ತರದ ವೇದಿಕೆಯ ಮೇಲೆ ವೆಂಕಟರಮಣ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಇದು ಮೂಲತಹ ಕಪ್ಪು ಬಣ್ಣದ ಒಳಪದರ ಕಲ್ಲಿನಿಂದ ನಿರ್ಮಿಸಿದ್ದು ಇತ್ತೀಚೆಗೆ ಲೋಹದ ಕಿರೀಟ ದೇಹದ ಭಾಗಗಳಿಗೆ ಲೋಹವನ್ನು ಲೇಪಿಸಲಾಗಿದೆ. ಗರ್ಭಗುಡಿಯನ್ನು ದ್ವಾರಪಾಲಕರು ಶಂಖ, ಚಕ್ರ,ಗದೆ ಹಿಡಿದು ನಿಂತಿದ್ದಾರೆ. ಸುಖನಾಸಿಯು ಗರ್ಭಗುಡಿಗಿಂತ ವಿಶಾಲವಾಗಿದ್ದು, ೪ ಕಂಬಗಳು ಸುಮಾರು ೯ ಅಡಿ ಎತ್ತರ ಹೊಂದಿದ್ದು ಕೆಳಭಾಗದಲ್ಲಿ ಪೀಠ ಹೊಂದಿ ಚೌಕಾಕಾರದಲ್ಲಿದೆ. ಮೇಲೆ ಸರಿದಂತೆ ಕಂಬದ ರಚನೆಯು ಅಷ್ಟ ಕೋನಗಳನ್ನು ಒಳಗೊಂಡು ಮೇಲ್ಭಾಗದಲ್ಲಿ ಬೋಧಿಗೆ ಹೊಂದಿ ಛಾವಣಿಯನ್ನು ಹೊತ್ತು ನಿಂತಿವೆ. ದೇವಾಲಯದ ಮುಂಬದಿಯಲ್ಲಿ ೧೨ ಅಡಿ ಅಗಲ ೧೨ ಅಡಿ ಉದ್ದ ಹೊಂದಿದ ಪುಷ್ಕರ್ಣಿ ಹೊಂದಿದ್ದು ಇದರ ಮೆಟ್ಟಿಲು ಆಳಕ್ಕೆ ಹೋದಂತೆ ಕಿರಿದಾದ ರೀತಿಯಲ್ಲಿ ನಿರ್ಮಿಸಿದ್ದಾರೆ. ಇದು ಬೇಸಿಗೆಯ ಕಾಲದಲ್ಲಿಯೂ ನೀರು ಹೊಂದಿರುತ್ತದೆ. ಪುಷ್ಕರಣಿಯ ಮುಂಭಾಗದಲ್ಲಿ ದೀಪಸ್ಥಂಭ ಒಳಗೊಂಡಿದ್ದು ೯ ಅಡಿ ಎತ್ತರ ಹೊಂದಿದೆ. ಇದರ ಶೈಲಿ ನೋಡಿದಾಗ ವಿಜಯ ನಗರೋತ್ತರ ಕಾಲದ್ದು ಎಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

**ತೋವಿನಕೆರೆಯ ಶ್ರೀನಿವಾಸ ದೇವಾಲಯ**

ಈ ದೇವಾಲಯವು ಚನ್ನರಾಯನ ದುರ್ಗದಿಂದ ಸುಮಾರು ೮ ಕಿ.ಮೀ ದೂರದ ತೋವಿನಕೆರೆಯಲ್ಲಿ ಕಂಡು ಬರುತ್ತದೆ. ದೇವಾಲಯವು ಪೂರ್ಣ ಪ್ರಮಾಣದಲ್ಲಿ ಗಾರೆ ಇಟ್ಟಿಗೆ ಹಾಗು ಮಧ್ಯಮ ಗಾತ್ರದ ಕಲ್ಲುಗಳಿಂದ ನಿರ್ಮಾಣವಾಗಿದೆ. ಇಟ್ಟಿಗೆಯ ವಿಸ್ತೀರ್ಣ ೨೧x೧೯x೧೪ ಸೆ.ಂಮೀ ಸುತ್ತಳತೆ ಹೊಂದಿದೆ. ದೇವಾಲಯವು ಗರ್ಭಗುಡಿ, ಅಂತರಾಳ ತೆರೆದ ಮಂಟಪ ಒಳಗೊಂಡಿದ್ದು ವಿಶಾಲವಾದ ಪ್ರಾಂಗಣ ಹಾಗು ಪ್ರದಕ್ಷಣಾ ಪಥವನ್ನು ಹೊಂದಿದೆ. ಗರ್ಭಗೃಹವು ಚೌಕಾಕಾರದಲ್ಲಿದ್ದು ೨ ೧/೨ ಅಡಿ ಎತ್ತರದ ಶ್ರೀನಿವಾಸನ ಶಿಲ್ಪ ಹೊಂದಿದೆ. ಈ ಶಿಲ್ಪದ ನಿರ್ಮಾಣದಲ್ಲಿ ಕಪ್ಪು ಬಣ್ಣದ ಒಳಪದರದ ಕಲ್ಲನ್ನು ಬಳಸಲಾಗಿದೆ. ಮೂರ್ತಿಯನ್ನು ನಿಂತ ರೀತಿಯಲ್ಲಿ ಖಂಡರಿಸಿದ್ದು ತನ್ನ ಎರಡು ಕೈಯಲ್ಲಿ ಶಂಖ ಹಾಗು ಚಕ್ರವನ್ನು ಹಿಡಿದು ನಿಂತಿದ್ದು , ಅಲಂಕೃತ ಮೂರ್ತಿಯಾಗಿದೆ. ತನ್ನ ಎಡ ಮತ್ತು ಬಲಭಾಗದಲ್ಲಿ ೧/೨ ಅಡಿ

ಎತ್ತರದ ಪತ್ನಿಯರಾದ ಪದ್ಮಾವತಿ ಮತ್ತು ಲಕ್ಷ್ಮಿಯನ್ನು ಕಂಡರಿಸಲಾಗಿದೆ. ಈ ಶಿಲ್ಪವನ್ನು ಸೋಮಸೂತ್ರದ ಅಧಿಷ್ಠಾನದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಿತ್ತಿಯಲ್ಲಿ ಯಾವುದೇ ಶಿಲ್ಪಗಳ ಕೆತ್ತನೆ ಇಲ್ಲದೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಗರ್ಭಗೃಹದ ಮುಂದಿನ ಭಾಗವೆಂದರೆ ಅಂತರಾಳ ಇಲ್ಲಿ ಯಾವುದೇ ಸ್ವತಂತ್ರ ಕಂಬಗಳಿಲ್ಲದೆ ೪ ಅರ್ಧ ಕಂಬಗಳನ್ನು ಕಾಣಬಹುದಾಗಿದ್ದು ಗೋಡೆಗೆ ಅಂಟಿಕೊಂಡಂತೆ ಭೋದಿಗೆಯನ್ನು ಕಾಣಬಹುದಾಗಿದೆ. ನಂತರದ ಭಾಗವೆಂದರೆ ತೆರೆದ ಮಂಟಪ ಇದು ಅಂತರಾಳಕ್ಕಿಂತ ವಿಶಾಲವಾಗಿದ್ದು ದ್ವಾರದ ಎಡ ಮತ್ತು ಬಲಭಾಗದಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ್ದು , ಬಲಭಾಗದ ಶಿಲ್ಪದ ಸೊಂಟದ ಭಾಗವನ್ನು ಹೆಚ್ಚು ಭಾಗಿಸಿ ಖಂಡರಿಸಿದ್ದು ತನ್ನ ಎರಡು ಕೈಗಳಲ್ಲಿ ಶಂಕು ಚಕ್ರ ಹಿಡಿದು ನಿಂತಿದ್ದು ಎಡಗಾಲಿನ ಮೇಲೆ ತನ್ನ ದೇಹದ ತೂಕವನ್ನು ಬಿಟ್ಟು ಎಡಗೈನಲ್ಲಿ ಗದೆಯನ್ನು ನೆಲಕ್ಕೂರಿ ಸೊಂಟದ ಮೇಲೆ ಕೈ ನಿಟ್ಟು ನಿಂತಂತೆ ಖಂಡರಿಸಲಾಗಿದೆ. ಮೂರ್ತಿಯು ಕೈಬಳೆ, ತೋಳುಬಂದಿ, ಕೊರಳ ಹಾರ, ಕಾಲ್ಕಡಗ, ಶಲ್ಯವನ್ನು ಒಳಗೊಂಡಿದೆ. ಈ ಶಿಲ್ಪಗಳು ೨ ೧/೨ ಅಡಿ ಎತ್ತರ ಹೊಂದಿದೆ.

ತೆರೆದ ಮಂಟಪದಲ್ಲಿ ೪ ಕಂಬಗಳು ಹೊಂದಿದ್ದು ಭಾವಣಿಯನ್ನು ಹೊತ್ತು ನಿಂತಿವೆ. ಕಂಬದ ಅದಿಷ್ಠಾನ ಚೌಕಾಕಾರದಲ್ಲಿದ್ದು ೪ ಹಂತದಿಂದ ಕೂಡಿದೆ. ಎರಡನೇ ಹಂತವು ವೃತ್ತಾಕಾರದಲ್ಲಿದ್ದು ೧೬ ಪಟ್ಟಿಗಳನ್ನು ಒಳಗೊಂಡಿದೆ. ಮಧ್ಯದಲ್ಲಿ ಅಡ್ಡ ಪಟ್ಟಿ ಬಂದಿದ್ದು ಪಟ್ಟಿಗಳ ಹಂತವನ್ನು ಬೇರ್ಪಡಿಸಿದಂತಿದೆ. ಮೂರನೇ ಪಟ್ಟಿಯು ಕೂಡ ೧೬ ಪಟ್ಟಿಗಳನ್ನೊಳಗೊಂಡಿದ್ದು, ಅದರ ಮೇಲ್ಭಾಗದಲ್ಲಿ ಚೌಕಾಕಾರದ ನಾಲ್ಕು ದಿಕ್ಕುಗಳನ್ನೊಳಗೊಂಡಿದ್ದು ಭೋದಿಗೆಯು ಭಾವಣಿಗಳನ್ನು ಹೊತ್ತು ನಿಂತಿದೆ. ದೇವಾಲಯದ ಮೇಲ್ಭಾವಣಿಯು ಗಾರೆ ಇಟ್ಟಿಗೆಯಿಂದ ನಿರ್ಮಿಸಿದ್ದಾರೆ. ಮಾವಿನ ಎಲೆಗಳ ಅಲಂಕಾರಿಕ ಪಟ್ಟಿ ಹೊಂದಿದೆ. ಅದರ ಮೇಲಣ ಪಟ್ಟಿ ಚೌಕಾಕಾರದಲ್ಲಿದ್ದು ಮೂರನೇ ಪಟ್ಟಿಯನ್ನು ಒಳಗೊಂಡಿದ್ದು ಅದು ಕೂಡ ಅಲಂಕಾರಿಕವಾಗಿದೆ. ಭಾವಣಿಯ ಮೇಲ್ಭಾಗದಲ್ಲಿ ಎಡ ಮತ್ತು ಬಲಭಾಗದಲ್ಲಿ ೯ ಪಟ್ಟಿಯನ್ನು ಒಳಗೊಂಡಿದ್ದು ಗುಮ್ಮಟಾಕಾರದ ಕೋಷ್ಠಕಗಳನ್ನು ಒಳಗೊಂಡಿದೆ. ಇದರಲ್ಲಿ ಯಾವುದೇ ಶಿಲ್ಪವನ್ನು ಇಡಲಾಗಿಲ್ಲ. ಗರ್ಭಗುಡಿಯ ಮೇಲ್ಭಾಗದಲ್ಲಿ ಶಿಖರವನ್ನು ನಿರ್ಮಿಸಿದ್ದು ಹೆಚ್ಚು ಅಲಂಕೃತವಾಗಿದೆ. ಇದರ ಮುಂಭಾಗದಲ್ಲಿ ದೀಪಸ್ಥಂಭವು ಸುಮಾರು ೧೨ ಅಡಿ ಎತ್ತರ ಹೊಂದಿದ್ದು ಅದರಲ್ಲಿ ಗಣೇಶನ ಮೂರ್ತಿಯನ್ನು ಕೆತ್ತಲಾಗಿದೆ. ಈ ದೇವಾಲಯವು ವಿಜಯನಗರೋತ್ತರ ಕಾಲದಲ್ಲಿ ನಿರ್ಮಿತವಾಗಿದ್ದಾಗಿದೆ.

### ಕುರಂಕೋಟೆಯ ದೊಡ್ಡ ಕಾಯಪ್ಪ ದೇವಾಲಯ

ಈ ದೇವಾಲಯವು ಕೊರಟಗೆರೆಯಿಂದ ತೋವಿನಕೆರೆ ಮಾರ್ಗವಾಗಿ ಚಲಿಸುವಾಗ ಕುರಂಕೋಟೆ ಎಂಬ ಗ್ರಾಮದಲ್ಲಿ ಕಂಡು ಬರುತ್ತದೆ. ದೊಡ್ಡ ರಾಯಪ್ಪ ದೇವಾಲಯವು ಇಂದಿನ ಕುರಂಕೋಟೆ ಗ್ರಾಮದ

ಹೊರವಲಯದಲ್ಲಿದೆ. ಇದರ ನಿರ್ಮಾಣದ ಕಾಲವು ೧೬೨೦-೨೧ ರ ಆಸು ಪಾಸಿನಲ್ಲಿ ಈ ಪ್ರಾಂತ್ಯವನ್ನು ಆಳ್ವಿಕೆ ಮಾಡುತ್ತಿದ್ದ ಕುರಂಗರಾಯನು ನಿರ್ಮಿಸಿದ್ದನು. ಈ ದೇವಾಲಯದ ಹೆಸರೇ ಸೂಚಿಸುವಂತೆ ದೊಡ್ಡ ಗಾತ್ರದ ಬಂಡೆಯಲ್ಲಿ ಹನುಮಂತನನ್ನು ಕೆತ್ತಲಾಗಿದ್ದು ಅದರಿಂದ ದೊಡ್ಡ ಕಾಯಪ್ಪ ಎಂಬ ಹೆಸರು ಬಂದಿದೆ. ಈ ದೇವಾಲಯಕ್ಕೆ ಗರ್ಭಗೃಹ, ಸುಖನಾಸಿ ತೆರೆದ ಮಂಟಪ ಒಳಗೊಂಡಿದೆ. ಗರ್ಭಗುಡಿಯಲ್ಲಿ ೩ ಅಡಿ ಎತ್ತರದ ಆಂಜನೇಯ ಮೂರ್ತಿಯನ್ನು ಕಾಣಬಹುದು. ಈ ಮೂರ್ತಿ ತನ್ನ ಎಡಗೈಯನ್ನು ಸೊಂಟದ ಮೇಲಿಟ್ಟು ಬಲಗೈಯನ್ನು ಮೇಲಕ್ಕೆ ಎತ್ತಿದಂತೆ ಕೆತ್ತಲಾಗಿದೆ. ಶಿಲ್ಪವು ತೋಳುಬಂದಿ ಹೊಂದಿದ್ದು ಉಗ್ರ ರೂಪದಲ್ಲಿದೆ. ಅಲ್ಲದೆ ದೇವಾಲಯವು ಪೂರ್ವಕ್ಕೆ ಮುಖಮಾಡದೆ ದಕ್ಷಿಣದ ಕಡೆಗೆ ಬಾಗಿಲನ್ನು ಒಳಗೊಂಡಿದೆ. ಸುಖನಾಸಿಯಲ್ಲಿ ೪ ಕಂಬಗಳಿದ್ದು ಸಾಧಾರಣ ಕೆತ್ತನೆಯಿಂದ ಕೂಡಿವೆ. ಮುಂದೆ ಸಾಗಿದರೆ ತೆರೆದ ಮಂಟಪವು ಜಗತಿಯ ಮೇಲ್ಭಾಗದಲ್ಲಿ ಕಂಬಗಳನ್ನು ನಿರ್ಮಿಸಲಾಗಿದೆ. ಇವು ಚೌಕಾಕಾರದ ಬೋಧಿಗೆ ಹೊಂದಿ ಛಾವಣಿಯನ್ನು ಹೊತ್ತು ನಿಂತಿವೆ.

ದೊಡ್ಡಕಾಯಪ್ಪ ದೇವಾಲಯವನ್ನು ೬ ಅಡಿ ಎತ್ತರದ ಜಗತಿಯ ಮೇಲೆ ನಿರ್ಮಿಸಿದ್ದು ಸುತ್ತಲು ದಕ್ಷಿಣಾಪಥ ಹೊಂದಿದೆ. ದೇವಾಲಯದ ಮುಭಾಗದಲ್ಲಿ ದೀಪಸ್ಥಂಭವಿದ್ದು ೧೯ ಕೋನಗಳ ಕೆತ್ತನೆ ಕಾಣಬಹುದು. ಮೇಲೆ ಹೋದಂತೆಲ್ಲ ಕಿರಿದಾಗಿ ವೃತ್ತಾಕಾರದ ರೀತಿಯಲ್ಲಿ ನಿರ್ಮಿಸಿ ಬೋಧಿಗೆಯು ಕುಂಬದ ರೀತಿಯಲ್ಲಿ ನಿರ್ಮಿಸಲಾಗಿದೆ. ದೇವಾಲಯದ ಹಿಂಭಾಗದಲ್ಲಿ ೬ ಇಡಿ ಉದ್ದ ೬ ಅಡಿ ಅಗಲದ ೮ ಅಡಿ ಹಾಳದ ಕಲ್ಯಾಣಿ ಹೊಂದಿದೆ. ಇಲ್ಲಿ ಶೇಖರಣೆಯಾದ ನೀರು ಮೂರ್ತಿಯನ್ನು ಸ್ವಚ್ಚಗೊಳಿಸಲು ಉಪಯೋಗಿಸುತ್ತಾರೆ. ಅಲ್ಲದೇ ಈ ನೀರಿನಿಂದ ಅನೇಕ ಭಕ್ತರ ಚರ್ಮರೋಗ ನಿವಾರಣೆಯಾಗುತ್ತದೆ ಎಂಬ ನಂಬಿಕೆ ಇದೆ. ಇದಕ್ಕೆ ಕಾರಣ ಬೆಟ್ಟದ ತಪ್ಪಲಿನಲ್ಲಿರುವ ಈ ಕಲ್ಯಾಣಿಗೆ ಬರುವ ನೀರು ಅನೇಕ ಗಿಡಮೂಲಿಕೆಗಳನ್ನು ಸ್ಪರ್ಶಿಸಿ ಸೇರುವುದರಿಂದ ರೋಗ ನಿವಾರಣೆಯಾಗಬಹುದು ಎಂದು ತಿಳಿಯಬಹುದಾಗಿದೆ. ಈ ದೇವಾಲಯದ ಹಿಂಬದಿಯಲ್ಲಿ ಅಂದು ಕುರಂಗರಾಯ ನಿರ್ಮಿಸಿದ ಗ್ರಾಮದ ಕಟ್ಟಡಗಳ ಅವಶೇಷವನ್ನು ಇಂದಿಗೂ ನೋಡಬಹುದಾಗಿದೆ. ಹಿಂದೆ ಈ ಪ್ರದೇಶ ಒಂದು ಗ್ರಾಮವಾಗಿತ್ತೆಂಬ ಅನೇಕ ನಿದರ್ಶನಗಳು ಇಲ್ಲಿ ದೊರೆಯುತ್ತದೆ.

### ಚನ್ನ ರಾಯನ ದುರ್ಗದ ಈಶ್ವರ ದೇವಾಲಯ

ಚನ್ನರಾಯನದುರ್ಗವು ಕೊರಟಗೆರೆಯಿಂದ ೮ ಕಿ.ಮೀ. ದೂರದಲ್ಲಿದೆ. ಇಲ್ಲಿ ಮಧುಗಿರಿಯ ಪಾಳೆಗಾರನಾದ ಚಿಕ್ಕಪ್ಪಗೌಡನು ೧೬೧೩ ರಲ್ಲಿ ಕೋಟೆ ನಿರ್ಮಿಸಿ ಕೋಟೆಯೊಳಗೆ ಈಶ್ವರ ದೇವಾಲಯವನ್ನು ನಿರ್ಮಿಸಿದ್ದಾನೆ. ಈ ದೇವಾಲಯವು ೪ ಅಡಿ ಎತ್ತರದ ಜಗತಿಯ ಮೇಲೆ ನಿರ್ಮಿಸಲಾಗಿದೆ. ಕ್ರಮವಾಗಿ ಗರ್ಭಗೃಹ ಸುಖನಾಸಿ ತೆರೆದ ಮಂಟಪವನ್ನು ಒಳಗೊಂಡಿದೆ. ಗರ್ಭಗೃಹ

ಚೌಕಕಾರವಾಗಿದ್ದು, ಮೂಲ ಮೂರ್ತಿಯು ನಾಶವಾಗಿದ್ದು ಅದರ ಜಾಗದಲ್ಲಿ ವಿಘ್ನೇಶ್ವರನನ್ನು ಇಂದು ತಂದಿರಿಸಲಾಗಿದೆ. ಗರ್ಭಗುಡಿ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಲಾಗಿದ್ದು ಸುಖನಾಸಿಯು ಗರ್ಭಗುಡಿಗಿಂತ ಹೆಚ್ಚು ವಿಸ್ತೀರ್ಣ ಹೊಂದಿದ್ದು ಯಾವುದೇ ಕಂಬಗಳನ್ನು ಒಳಗೊಂಡಿಲ್ಲ. ಮುಖ ಮಂಟಪದ ಬಾಗಿಲಲ್ಲಿ ದ್ವಾರ ಪಾಲಕರ ಮೂರ್ತಿಗಳನ್ನು ಕಾಣಬಹುದು. ಈ ಶಿಲ್ಪವು ಡಮರುಗ, ತ್ರಿಶೂಲ, ಜಪಮಾಲೆ ಹೊಂದಿದ್ದು ಒಂದೇ ಕಾಲಿನಲ್ಲಿ ನಿಂತಿದ ರೀತಿ ಖಂಡರಿಸಲಾಗಿದೆ. ಮುಖ ಮಂಟಪವು ನಾಲ್ಕು ಕಂಬಗಳಿಂದ ಕೂಡಿದ್ದು ಸಾಧಾರಣ ಕೆತ್ತನೆಯಿಂದ ಕೂಡಿವೆ. ಎರಡು ಅರ್ಧ ಕಂಬಗಳಾಗಿದ್ದು ಮತ್ತೆರಡು ಸ್ವತಂತ್ರ ಕಂಬಗಳಾಗಿ ಚೌಕಾಕಾರದ ೨ ಹಂತವನ್ನು ಒಳಗೊಂಡಿವೆ.

ತೆರೆದ ಮಂಟಪದ ಮೇಲ್ಛಾವಣಿಯಲ್ಲಿ ಕಪೋತ ಭಾಗ ಹೊಂದಿದ್ದು,ಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಾಣ ಮಾಡಿದ ೨ ಪಟ್ಟಿಗಳನ್ನು ಒಳಗೊಂಡಿದೆ. ಮೊದಲ ಪಟ್ಟಿಕೆಯಲ್ಲಿ ಪಕ್ಷಿಗಳು ರೆಕ್ಕೆ ಬಿಚ್ಚಿ ಹಾರುವರೀತಿಯಲ್ಲಿವೆ. ಎರಡು ಮತ್ತು ಮೂರನೆ ಸಾಲುಗಳು ಅರಳಿದ ಪುಷ್ಪದಳಗಳ ರೂಪದಲ್ಲಿ ಕೆತ್ತಲಾಗಿದೆ. ಅಲ್ಲದೆ ಸಿಂಹವನ್ನು ಕೆತ್ತಲಾಗಿದ್ದು ಅದು ಗರ್ಜಿಸುತ್ತಿರುವ ರೀತಿಯಲ್ಲಿ ನಿರ್ಮಿಸಲಾಗಿದೆ. ಬಲಭಾಗದಲ್ಲಿ ಅದೇ ಪಟ್ಟಿ ಎಡಭಾಗದಲ್ಲಿ ತುಳಸಿ ಕುಂಡು ಮುಂಭಾಗದಲ್ಲಿ ದೊಡ್ಡ ನೀರಿನ ದೋಣೆಯನ್ನು ನಿರ್ಮಿಸಲಾಗಿದೆ.

**ನೇಗಲಾಲದ ಕಾವಲಮ್ಮ ದೇವಾಲಯ**

ನೇಗಲಾಲ ಗ್ರಾಮವು ಕೊರಟಗೆರೆ ತಾಲ್ಲೂಕಿನ ವ್ಯಾಪ್ತಿಗೆ ಸೇರಿದ್ದು ೧೧ ಕಿ.ಮೀ. ಅಂತರದಲ್ಲಿ ಕಂಡು ಬರುತ್ತದೆ. ಇಲ್ಲಿನ ಊರ ಹೊರಭಾಗದಲ್ಲಿ ಶ್ರೀ ಕಾವಲಮ್ಮ ದೇವಾಲಯವು ಅತ್ಯಂತ ಹಳೆಯ ದೇವಾಲಯವಾಗಿದೆ. ಈ ದೇವಾಲಯ ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಇದರ ವೈಶಿಷ್ಟ ವೆಂದರೆ ಕೇವಲ ಗರ್ಭಗುಡಿಯೊಂದನ್ನು ಒಳಗೊಂಡಿದ್ದು ಇದರ ಗೋಡೆ ನಿರ್ಮಾಣದಲ್ಲಿ ನೀರಿನ ಬದಲಾಗಿ ಹಾಲು ಹಾಗು ತುಪ್ಪವನ್ನು ಬಳಸಿ ನಿರ್ಮಿಸಲಾಗಿದೆ. ಇದರ ಎತ್ತರ ೭ ಅಡಿ ಉದ್ದ ಒಳಗೊಂಡಿದೆ. ಇದರ ಮೇಲ್ಛಾವಣಿ ಎಲ್ಲವೂ ಹುಲ್ಲಿನಿಂದ ಮುಚ್ಚಲ್ಪಟ್ಟಿದೆ. ಇದರ ಜೀರ್ಣೋದ್ಧಾರ ಕಾರ್ಯವನ್ನು ಗೊಲ್ಲ ಜನಾಂಗದವರು ಮಾತ್ರ ನಿರ್ವಹಿಸುತ್ತಾರೆ.

ಗರ್ಭಗುಡಿಯ ಬಾಗಿಲು ಯಾವಾಗಲು ಮುಚ್ಚಿದ್ದು ವರ್ಷದಲ್ಲಿ ಒಂದು ಬಾರಿ ಮಾತ್ರ ತೆಗೆಯಲಾಗುತ್ತದೆ. ದೇವಾಲಯದ ಮುಂಗಣ ಪಾಳೆಗಾರರ ಕಾಲದಲ್ಲಿ ನಿರ್ಮಾಣವಾದ ತೂಗುಯ್ಯಾಲೆ ಮಂಟಪವು ೧೭ ಅಡಿ ಎತ್ತರವನ್ನು ಒಳಗೊಂಡಿದೆ. ಕಂಬದ ಅಧಿಷ್ಠಾನವು ಚೌಕಾಕಾರವಾಗಿದೆ ಕಂಬದ ಬಲಭಾಗದಲ್ಲಿ ಶಾಸನ ಕಂಡು ಬಂದಿದ್ದು, ಇದನ್ನು ಸ್ಥಾಪಿಸಿದ ವ್ಯಕ್ತಿಯನ್ನು ಸೂಚಿಸುತ್ತದೆ. ಎರಡು ಕಂಬಗಳ ಮಧ್ಯೆ ಕಬ್ಬಿಣದ ಬಳೆಯಿಂದ ಸರಪಳಿ ಮಾಡಿ ಅದಕ್ಕೆ ಕಂಚಿನ ಕಳಸವನ್ನು ತೂಗಲು ಬಿಟ್ಟಿದ್ದು ಇಂದಿಗೂ ಅದಕ್ಕೆ ಪೂಜೆ ಮಾಡಲಾಗುತ್ತದೆ. ಈ ದೇವಾಲಯವು ಐತಿಹಾಸಿಕ ದೇವಾಲಯವಾಗಿದೆ ಎಂದೇಳಬಹುದು.

## ೪.೨ ಮೂರ್ತಿ ಶಿಲ್ಪಗಳು

ಮೂರ್ತಿ ಶಿಲ್ಪಗಳ ಬಗ್ಗೆ ಹೇಳುವುದಾದರೆ ದೇವತಾರಾಧನೆ ಮತ್ತು ವ್ಯವಸ್ಥಿತ ದೇವಾಲಯಗಳ ನಿರ್ಮಾಣ ಎಂದು ಆರಂಭವಾಯಿತೋ ಅಂದಿನಿಂದಲೂ ದೇವತಾ ಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ರೂಢಿಗೆ ಬಂತು ಎಂದೇಳಬಹುದು. ಯಾವುದೇ ಪಂಥದ ದೇವಾಲಯವಿರಲಿ ಆ ದೇವಾಲಯದೊಳಗೆ ದೇವತಾ ಮೂರ್ತಿ ಶಿಲ್ಪ ಇದ್ದೇ ಇರುತ್ತದೆ. ಈ ರೀತಿಯ ಮೂರ್ತಿಗಳನ್ನು ಕುರಿತು ಶಾಸ್ತ್ರೀಯವಾಗಿ ಅಧ್ಯಯನಮಾಡುವ ಶಾಸ್ತ್ರವನ್ನು ಸ್ಥೂಲವಾಗಿ ಮೂರ್ತಿ ಶಾಸ್ತ್ರ ಎಂದು ಕರೆಯಬಹುದು. ಮೂರ್ತಿ ಶಿಲ್ಪವನ್ನು ವಿಗ್ರಹ, ಪ್ರತಿಮಾಶಿಲ್ಪ,ಮೂರ್ತಿ, ಬಿಂಬ, ಪ್ರತಿಕೃತಿ ಮೊದಲಾದ ಸಮಾನಾರ್ಥಕ ಪದಗಳಿಂದ ಕರೆಯಲಾಗುತ್ತದೆ. ಮೂರ್ತಿಯ ಒಂದು ರೂಪ ಒಂಭತ್ತು ಅಂಗಗಳನ್ನು ಒಳಗೊಂಡಿರುತ್ತದೆ. ಅವುಗಳು ಪ್ರಮುಖವಾಗಿ ನ್ಯಾಸ ಅಲಂಕಾರ, (ರೂಪ ಸಂಯೋಜನೆ) ಮುದ್ರಾ (ಹಸ್ತ ಮುದ್ರೆ)ಆಯುಧ, ಭಾಪ್ರುಕಕ್ಷ (ಆಸನ) ವಾಹನ, ಉಪದೇವ (ಪ್ರಧಾನ ದೇವತೆ ಜೊತೆ ತೋರಿಸಲ್ಪಡುವ ಇತರೆ ಕಡಿಮೆ ಮಹತ್ವದ ದೇವತೆಗಳು) ಈ ಶಾಸ್ತ್ರೀಯ ಸಂಪ್ರದಾಯಕ್ಕನುಗುಣವಾಗಿ ದೇವತಾ ಮೂರ್ತಿಗಳು ರೂಪುಗೊಳ್ಳುತ್ತವೆ.[೧೨]

ಶಿಲ್ಪ ಎಂಬ ಪದ ಮೊದಲು ವಿಶಾಲ ಅರ್ಥವನ್ನು ಪಡೆದಿತ್ತು. ಅರವತ್ತನಾಲ್ಕು ವಿದ್ಯೆಗಳಲ್ಲಿ 'ಶಿಲ್ಪ' ಎಂಬ ಹೆಸರು ಅನ್ವಯವಾಗುತ್ತಿತ್ತು.ಮುಂದೆ ಇದರ ವ್ಯಾಪ್ತಿ ಸೀಮಿತಗೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಯಿತು.[೧೩] ಜಗತ್ತು ಸೃಷ್ಟಿಯಾವಾಗ ಆಯಿತೋ ಅಂದೇ ಶಿಲ್ಪವು ಆರಂಭವಾಯಿತೆಂದು ವೇದಗಳು ತಿಳಿಸುತ್ತವೆ. ಜಗತ್ತಿನ ಸೃಷ್ಟಿಕರ್ತನನ್ನು ಜಗತ್ ಶಿಲ್ಪಿ ಎಂದು ಕರೆಯುವುದುಂಟು.[೧೪] ಶಿಲ್ಪಂ ಕರ್ಮಕಲಾಧಿಕಂ ಎನ್ನುವುದು ಅಮರ ಸಿಂಹನ ಅಮರ ಕೋಶದ ವಿವರಣೆಯಾಗಿದೆ. ಕರ್ತೃವಿನ ಅಧಿಕ ಕೌಶಲ್ಯವನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು.[೧೫]

ಭಾರತದ ವಿವಿಧ ನೆಲೆಗಳಲ್ಲಿ ಉತ್ಖನನದ ಸಂದರ್ಭದಲ್ಲಿ ದೊರೆತ ಮೂರ್ತಿ ಶಿಲ್ಪಗಳು ವಾಸ್ತು ಶಿಲ್ಪಗಳಷ್ಟೇ ಪ್ರಾಚೀನತೆಯನ್ನು ಪಡೆದಿವೆ. ಭಾರತದಲ್ಲಿ ಸಿಂಧೂ ನಾಗರೀಕತೆಯಲ್ಲಿ ಕಂಡು ಬಂದ ಗೂಳಿ, ಲಿಂಗ, ಪಶುಪತಿ ನೃತ್ಯ ಮಾಡುವ ಸ್ತ್ರಿ ಶಿಲ್ಪಗಳು ಇಂದಿಗೂ ಚರ್ಚೆಗಳಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿವೆ ಎಂದರೆ ತಪ್ಪಾಗಲಾರದು. ಇನ್ನೂ ಚಾರಿತ್ರಿಕ ಯುಗಕ್ಕೆ ಬಂದರೆ ಪ್ರಾಚೀನ ಶಿಲ್ಪಕೃತಿಗಳು ಮೌರ್ಯರ ಕಾಲದಲ್ಲಿ ಕಲ್ಲಿನ ಸ್ತಂಭಗಳ ಮೇಲಿನ ವೃಷಭ, ಆನೆ, ಸಿಂಹ ಕುದುರೆ ಮೊದಲಾದ ಆಕೃತಿಗಳು ಮುಖ್ಯವಾದವುಗಳಾಗಿವೆ. ತದನಂತರದಲ್ಲಿ ಶೃಂಗ , ಕುಶಾನ , ಕಳಿಂಗರು ಶಿಲ್ಪ ಕಲೆಯನ್ನು ಉಳಿಸಿಕೊಂಡು ಬಂದರು. ಗುಪ್ತರ ಕಾಲವನಂತೂ ಶಿಲ್ಪ , ಸಾಹಿತ್ಯ , ವಿಜ್ಞಾನ ಎಲ್ಲವುಗಳ ದೃಷ್ಟಿಯಿಂದಲೂ ಸುವರ್ಣಯುಗ ಎನ್ನಬಹುದು.[೧೬]

ಇನ್ನೂ ಕರ್ನಾಟಕದಲ್ಲಿ ಮೂರ್ತಿ ಶಿಲ್ಪಗಳ ಪ್ರಾಚೀನತೆಯನ್ನು ಗಮನಿಸುವುದಾದರೆ, ಕುಪ್ಪಗಲ್, ಪಿಕ್ಲಿಹಾಳ್, ಸಂಗನಕಲ್ಲು, ತೆಕ್ಕಲಕೋಟೆ ಮುಂತಾದ ನೆಲೆಗಳಲ್ಲಿ ನಡೆಸಿದ ಉತ್ಖನಗಳಿಂದ ನೂತನ ಶಿಲಾಯುಗದ ನಡುವೆ ಮಣ್ಣಿನ ಗೊಂಬೆಗಳು ದೊರೆತಿವೆ.[೧೭] ದಕ್ಷಿಣ ಭಾರತದಲ್ಲಿ ಐತಿಹಾಸಿಕ ಯುಗದಲ್ಲಿ ಶಾತವಾಹನರ ಕಾಲದ ಗುಡಿಮಲ್ಲಂ, ಶಿವಲಿಂಗಂ, ಅತ್ಯುತ್ತಮ ಕೊಡುಗೆಯಾಗಿವೆ.[೧೮] ಅದೇ ರೀತಿ ಕದಂಬ , ಗಂಗರು, ಚಾಲುಕ್ಯ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು , ಹೊಯ್ಸಳರು, ವಿಜಯನಗರ ಅರಸರು ಹಾಗು ಸ್ಥಳೀಯ ಪಾಳೆಯಗಾರರು ಇವರೆಲ್ಲರೂ ಮೂರ್ತಿ ಶಿಲ್ಪಕಲೆಗೆ ನೀಡಿದ ಕಾಣಿಕೆ ಅಪಾರವಾಗಿದ್ದು, ಚನ್ನರಾಯನದುರ್ಗ ಪರಿಸರದ ಮೂರ್ತಿ ಶಿಲ್ಪಗಳ ಅಧ್ಯಯನದ ದೃಷ್ಟಿಯಿಂದ ನಾವು ಪ್ರಮುಖವಾಗಿ ಈ ಕೆಳಕಂಡಂತೆ ವಿಂಗಡಿಸಲಾಗಿದೆ.

೧)ಶಿಲಾ ಶಿಲ್ಪಗಳು

೨) ಗಾರೆ ಶಿಲ್ಪಗಳು

೩) ಲೋಹದ ಶಿಲ್ಪಗಳು

**೧) ಶಿಲಾ ಶಿಲ್ಪಗಳು**

ಆರಂಭದಿಂದಲೂ ಮಾನವನು ಶಿಲೆಗಳ ಜೊತೆಯಲ್ಲಿಯೇ ತನ್ನ ಜೀವನವನ್ನು ನಡೆಸಿಕೊಂಡು ಬಂದಿರುವುದನ್ನು ಕಾಣಬಹುದು. ಶಿಲೆಗಳ ಮೂಲಕ ಮೂರ್ತಿ ಕೆತ್ತನೆಯ ಕಾರ್ಯವನ್ನು ನಿರ್ವಹಿಸಿಕೊಂಡು ಸಹ ಬಂದಿದ್ದಾನೆ. ಮತ್ಸ್ಯಪುರಾಣದಲ್ಲಿ ಕಲ್ಲಿನ ಮೂರ್ತಿಯ ತಯಾರಿಕೆಯ ಬಗ್ಗೆ ನಿರ್ಧರಿಸಿದೆ. ಶಿಲೆಗಳಲ್ಲಿಯು ಸಹ ಲಿಂಗಾದಾರಿತ ಶಿಲ್ಪಗಳನ್ನು ಗುರುತಿಸಲಾಗಿದ್ದು ಪುರುಷ ಶಿಲೆ, ಸ್ತ್ರಿ ಶಿಲೆ, ನಪುಂಸಕ ಶಿಲೆಗಳಿದ್ದು ಕ್ರಮವಾಗಿ ಮುಖ್ಯ ಮೂರ್ತಿ,ಪೀಠ, ಪಿಂಡಕ ಅಥವ ಕೆಳಭಾಗದ ರಚನೆಗಳು ಬಳಸಬೇಕೆಂದು ತಿಳಿಸಲಾಗಿದೆ. ಚನ್ನರಾಯನ ದುರ್ಗದ ಪರಿಸರದಲ್ಲೂ ಸಹ ಶಿಲೆಗಳ ಮೂಲಕ ರಚನೆಯಾದ ಹಲವು ಮೂರ್ತಿ ಶಿಲ್ಪಗಳನ್ನು ಕಾಣಬಹುದು. ಇವುಗಳು ವಿವಿಧ ಅರಸರ ಕಾಲದಲ್ಲಿ ನಿರ್ಮಾಣಗೊಂಡಿದ್ದು, ಶೈವ, ವೈಷ್ಣವ, ಶಾಕ್ತಪಂಥ ಹಾಗು ಜೈನ ಶಿಲ್ಪಗಳನ್ನು ಸಹ ಕಾಣಬಹುದಾಗಿದೆ.

ಚನ್ನರಾಯನ ದುರ್ಗ ಪರಿಸರವು ವೈಷ್ಣವ ಪಂಥಕ್ಕೆ ಆಶ್ರಯವನ್ನು ನೀಡಲಾಗಿತ್ತು ಎಂಬುದಕ್ಕೆ ಈ ಭಾಗದಲ್ಲಿ ಕಂಡು ಬಂದ ವೈಷ್ಣವ ಶಿಲ್ಪಗಳೇ ಸಾಕ್ಷಿಯಾಗಿವೆ. ಈ ಭಾಗದಲ್ಲಿ ಕಂಡ ಬಂದ ಪ್ರಮುಖ ವೈಷ್ಣವ ದೇವಾಲಯಗಳೆಂದರೆ, ಚನ್ನರಾಯನದುರ್ಗದ ಕೋಟೆಯೊಳಗಿನ ಚನ್ನಕೇಶವ ದೇವಾಲಯ, ಕೊರಟಗೆರೆಯ ಕೋಟೆ ಮೇಲಿನ ವೆಂಕಟರಮಣ ದೇವಾಲಯ, ತೋವಿನಕೆರೆಯ ಶ್ರೀನಿವಾಸ ದೇವಾಲಯಗಳು ಮುಖ್ಯವಾಗಿವೆ. ಸಾಮಾನ್ಯವಾಗಿ ಗರ್ಭ ಗೃಹದಲ್ಲಿ ಮುಖ್ಯ ಮೂರ್ತಿ ಹೊಂದಿದ್ದು, ತೆರೆದ

ಮಂಟಪ ಮತ್ತು ನವರಂಗದಲ್ಲಿ ದ್ವಾರಪಾಲಕರನ್ನು ಖಂಡರಿಸಲಾಗಿದೆ. ಈ ಪರಿಸರದ ಎಲ್ಲಾ ವೈಷ್ಣವ ದೇವಾಲಯಗಳಲ್ಲೂ ದ್ವಾರಪಾಲಕರುಗಳ ಶಿಲ್ಪಗಳು ಕಂಡುಬಂದಿವೆ. ಚನ್ನಕೇಶವ ದೇವಾಲಯದಲ್ಲಿನ ದ್ವಾರಪಾಲಕ ಶಿಲ್ಪಗಳು ಗ್ರಾನೈಟ್, ಕಲ್ಲಿನಿಂದ ನಿರ್ಮಿಸಿದ್ದು, ಚತುರ್ಭುಜಧಾರಿಯಾಗಿ ದ್ವಿಭಂಗಿ ಸ್ಥಾನಿಕವಾಗಿದೆ. ಕಿರೀಟ ಮುಕುಟದಾರಿಯಾದ ಈ ಮೂರ್ತಿಗಳ ಕಿವಿಯಲ್ಲಿ ಕುಂಡಲಿಗಳಿದ್ದು ನೀಳವಾದ ಕಣ್ಣು ಮಂದಹಾಸ ಬೀರುತ್ತಿರುವ ಮುಖವನ್ನು ಕಾಣಬಹುದು. ತನ್ನ ಕೈಗಳಲ್ಲಿ ಶಂಕು, ಚಕ್ರ , ಗಧಾ ಹೊಂದಿದ್ದು ಕಂಠಿಹಾರ, ಭುಜಬಂಧ, ಸ್ಕಂಧಮಾಲೆ, ಉದಾರಭಂದ, ಹೊಳೆ, ಕಾಲ್ಗಡಗ ಹೊಂದಿದೆ. ಎಡಭಾಗದ ಶಿಲ್ಪವು ಬಲಗಾಲಿನ ಮೇಲೆ ತನ್ನ ದೇಹದ ಭಾರವನ್ನು ಬಿಟ್ಟು ಎಡಗಾಲನ್ನು ಮಡಚಿ ಬಲಗೈನಿಂದ ಗದೆಯನ್ನು ನೆಲಕ್ಕೂರಿ ನಿಂತ ರೀತಿ ಖಂಡರಿಸಲಾಗಿದೆ. ಇದೇ ರೀತಿಯ ಶಿಲ್ಪಗಳು ಕೊರಟಗೆರೆಯ ಕೋಟೆಯ ವೆಂಕಟರಮಣ ದೇವಾಲಯದ ದ್ವಾರದಲ್ಲಿ ಹಾಗು ತೋವಿನಕೆರೆ ಶ್ರೀನಿವಾಸ ದೇವಾಲಯದ ತೆರೆದ ಮಂಟಪದ ಬಾಗಿಲಲ್ಲಿ ಇದೇ ರೀತಿಯ ಶಿಲ್ಪಗಳನ್ನು ಖಂಡರಿಸಲಾಗಿದೆ.

ಕೊರಟಗೆರೆ ನಗರದಿಂದ ಮಧುಗಿರಿ ಮಾರ್ಗವಾಗಿ ಚಲಿಸುವಾಗ ಕಂಡು ಬರುವ ಗ್ರಾಮವೇ ತುಂಬಾಡಿ. ಗ್ರಾಮದ ಹಳೆ ಕೆರೆಯ ಕೆಳಭಾಗದಲ್ಲಿ ಕದಂಬ ನಾಗರ ಶೈಲಿಯಲ್ಲಿ ನಿರ್ಮಾಣವಾದ ವಿಜಯನಗರೋತ್ತರ ಕಾಲದ ನಂದೀಶ್ವರ ದೇವಾಲಯದಲ್ಲಿ ಶಿವಲಿಂಗ ಕಾಣಬಹುದು. ಇದು ಪೂರ್ವಾಭಿಮುಖವಾಗಿದ್ದು, ಬ್ರಹ್ಮ ಮತ್ತು ವಿಷ್ಣು ಭಾಗಗಳನ್ನು ಒಳಗೊಂಡಿದೆ. ಈ ಲಿಂಗಕ್ಕೆ ಜಲಹರಿಯು ಇದ್ದು ಜಲಹರಿಯ ತಳಭಾಗದಲ್ಲಿ ಎರಡು ಸಿಂಹಗಳು ದಿಟ್ಟಿಸಿ ನೋಡುವ ಹಾಗೆ ಎಡ ಬಲದಲ್ಲಿ ಕೆತ್ತಲಾಗಿದೆ. ಪ್ರಾಣಿ ಪೀಠದ ೨ ಅಡಿ ಎತ್ತರದ ಸೋಮ ಸೂತ್ರವನ್ನು ಕಾಣಬಹುದು. ಅದೇ ರೀತಿ ತೋವಿನಕೆರೆಯ ವಿರೂಪಾಕ್ಷ ದೇವಾಲಯವು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದ್ದು ಪಾಣಿ ವೇದವು ಇತ್ತೀಚಿನದಾಗಿದ್ದು ಅದರಲ್ಲಿ ಪ್ರಾಚೀನ ಕಾಲದ ಸೋಮಸೂತ್ರವನ್ನು ಕಾಣಬಹುದಾಗಿದೆ. ಅದೇ ರೀತಿ ಬಂಡೇಹಳ್ಳಿಯ ಗಂಗಾಧರೇಶ್ವರ ಗವಿಯಲ್ಲಿ ಪಾಣಿಪೀಠ ಹೊಂದಿಲ್ಲದೆ ಜಲಹರಿಯು ನೆಲಕ್ಕೆ ಊಳಲಾಗಿದೆ. ಈ ಜಲಹರಿಯು ೨ ೧/೨ ಅಡಿ ಅಗಲ ೩ ಅಡಿ ಉದ್ದ ಒಳಗೊಂಡಿದೆ. ಈ ಲಿಂಗದ ವಿಶೇಷವೆಂದರೆ ಸೋಮಸೂತ್ರವು ಎರಡು ಹೊಂದಿದ್ದು ಎತ್ತರದಲ್ಲಿ ೧೦ ೧/೨ ಇಂಚು ವ್ಯತ್ಯಾಸವಿದ್ದು ಒಂದಕ್ಕೊಂದು ಕೂಡಿಕೊಂಡ ರೀತಿಯಲ್ಲಿ ಖಂಡರಿಸಲಾಗಿದೆ. ಇದರಲ್ಲಿ ಬ್ರಹ್ಮ ವಿಷ್ಣುವಿನ ಭಾಗಗಳು ಕಂಡುಬಂದಿಲ್ಲ,.

ಬಂಡೇಹಳ್ಳಿಯ ಗಂಗಾಧರೇಶ್ವರ ಗವಿಯಲ್ಲಿ ಭೈರವ ಮೂರ್ತಿ ಶಿಲ್ಪ ಕಂಡುಬರುತ್ತದೆ. ಈ ಶಿಲ್ಪವನ್ನು ಗ್ರಾನೈಟ್ ಶಿಲೆಯಿಂದ ಖಂಡರಿಸಲಾಗಿದೆ. ಇಲ್ಲಿ ಎರಡು ಶಿಲ್ಪಗಳು ಕಂಡು ಬಂದಿದ್ದು ಪೂರ್ವಾಭಿಮುಖವಾಗಿ ಕೆತ್ತಲಾಗಿದೆ. ಸುಮಾರು ೪ ಅಡಿ ಎತ್ತರ ಒಳಗೊಂಡಿದ್ದು ಚತುರ್ಭುಜಧಾರಿಯಾಗಿ ಕೆದರಿದ ಜಡೆ ಹೊಂದಿ ಮಂದಹಾಸ ಬೀರುವ ರೀತಿ ಖಂಡರಿಸಲಾಗಿದೆ. ಸ್ಥಾನಿಕ ಭಂಗಿಯಲ್ಲಿರುವ ಭೈರವ ತನ್ನ ಕೈಗಳಲ್ಲಿ ಯಜ್ಞೋಪವೀತ, ಸರ್ಪಕುಂಡಲ, ಎದೆಪಟ್ಟಿ, ರುಂಡಗಳ ಹಾರವು ಎಡಗಾಲಿನವರೆಗೆ ಇದೆ.

ಎಡಗೈಯಲ್ಲಿ ಡಮರುಗ ಮತ್ತೊಂದು ಕೈಯಲ್ಲಿ ರಾಕ್ಷಸನ ತಲೆ ಹಿಡಿದವನು. ಕಾಲ್ಗಡಗ ಪಾದರಕ್ಷೆ ಧರಿಸಿದಂತೆ ಕೆತ್ತಲಾಗಿದೆ. ಮತ್ತೊಂದು ಶಿಲ್ಪವು ಕೂಡ ಇದೇ ರೀತಿಯಲ್ಲಿ ಖಂಡರಿಸಲಾಗಿದೆ.

ತೋವಿನಕೆರೆಯ ಶ್ರೀನಿವಾಸ ಮೂರ್ತಿಯು ೨ ೧/೨ ಅಡಿ ಎತ್ತರದಲ್ಲಿದ್ದು ಪಾಳೆಗಾರರ ಕಾಲದಲ್ಲಿ ನಿರ್ಮಿಸಿದ ದೇವಾಲಯವಾಗಿದೆ. ಈ ಶಿಲ್ಪವು ಕಪ್ಪು ಬಣ್ಣದ ಒಳಪದರ ಶಿಲೆಯಿಂದ ನಿರ್ಮಿಸಲಾಗಿದೆ. ಶಿಲ್ಪವು ಚತುರ್ಭುಜಧಾರಿಯಾಗಿದ್ದು ತನ್ನ ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮಗಳನ್ನು ಹೊಂದಿರುವನು. ಕಿರೀಟ, ಕೇಯೂರ, ಕಂಠಿಹಾರ, ಭುಜಬಂಧ, ಸ್ಕಲದಮಾಲೆ ಉದರಬಂಧ,ಯಜ್ಞೋಪವಿತ,ವೈಜಯಂತಿ, ಕೈಬಳೆ, ಕಾಲ್ಗಡಗ ಮುಂತಾದವುಗಳನ್ನು ಧರಿಸಿದ್ದಾನೆ. ಸೊಂಟದ ಬಿಗಿತ ಪಾದದವರೆಗೂ ಇದೆ. ಬದಿಯಲ್ಲಿ ಶ್ರೀದೇವಿ, ಭೂದೇವಿಯವರು ನಿಂತಿರುವಂತೆ ಖಂಡರಿಸಲಾಗಿದೆ. ಮೂರ್ತಿ ಶಿಲ್ಪ ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ.

ಕೊರಟಗೆರೆಯ ಕೋಟೆ ವೆಂಕಟರಮಣ ಮೂರ್ತಿ ಶಿಲ್ಪವನ್ನು ಪಾಳೆಗಾರರ ಕಾಲದಲ್ಲಿ ಪ್ರತಿಷ್ಠಾಪಿಸಲಾಗಿದ್ದು , ಕಪ್ಪು ಬಳಪದ ಕಲ್ಲಿನಿಂದ ಖಂಡರಿಸಲಾಗಿದೆ. ಮುಖದಲ್ಲಿ ಮಂದಹಾಸ ಹೊಂದಿದ ಈ ಮೂರ್ತಿ ಕಿರೀಟ ಧರಿಸಿದ್ದು, ಕೊರಳಿಗೆ ಹಾರ, ಕೈ ಬಳೆ, ತೋಳುಬಂಧಿ, ನಡುಪಟ್ಟಿ, ಎದೆ ಪಟ್ಟಿಗಳಿಂದ ಅಲಂಕೃತವಾಗಿದೆ. ಸ್ಥಾನಿಕ ಭಂಗಿಯಲ್ಲಿರುವ ಈ ಮೂರ್ತಿ ಚತುರ್ಭುಜಧಾರಿಯಾಗಿದ್ದು , ಶಂಖ ಚಕ್ರ , ಗದೆ ಹಿಡಿದು ತೇಜೋಮಯ ಮೂರ್ತಿಯಾಗಿದೆ.

ವಿಘ್ನೇಶ್ವರನ ಶಿಲ್ಪಗಳು ಈ ಪರಿಸರದಲ್ಲಿ ಹೆಚ್ಚು ಕಂಡು ಬರುತ್ತವೆ. ಚನ್ನರಾಯನದುರ್ಗದ ಈಶ್ವರ ದೇವಾಲಯದಲ್ಲಿನ ಶಿಲ್ಪವು ಕಪ್ಪು ವರ್ಣದ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಲಾಗಿದೆ. ಇದು ೧ ೧/೨ ಅಡಿ ಎತ್ತರ ಹೊಂದಿದೆ. ಕಿರೀಟ ಧಾರಿಯಾದ ಶಿಲ್ಪವು ಚತುರ್ಭುಜ ಧಾರಿಯಾಗಿದ್ದು, ಎರಡು ಕೈಗಳಲ್ಲಿ ಆಯುಧ ಹೊಂದಿದ್ದು ಮತ್ತೆರಡು ಕೈಗಳಲ್ಲಿ ತಿಂಡಿ-ತಿನಿಸು ಹಿಡಿದು ತನ್ನ ಬಲಗಾಲನ್ನು ಮಡಚಿ ಎಡಗಾಲನ್ನು ಕೆಳಗೆ ಬಿಟ್ಟ ರೀತಿ ಕೆತ್ತಲಾಗಿದೆ. ಕೊರಳಸರ, ಕೈ ಕಡಗ ಸೊಂಟಕ್ಕೆ ಸರ್ಪ ಸುತ್ತಿಕೊಂಡು ಆನೆಯ ಶಿರವನ್ನು ಹೊಂದಿದೆ. ಈ ಶಿಲ್ಪವು ಕಿವಿಗಳನ್ನು ಹೆಚ್ಚು ಅಗಲವಾಗಿ ಖಂಡರಿಸಲಾಗಿದೆ. ಅದೇ ರೀತಿಯಲ್ಲಿ ಬಂಡೇಹಳ್ಳಿಯ ಗಂಗಾಧರೇಶ್ವರ ಗವಿಯಲ್ಲಿ ಉತ್ತರಾಭಿಮುಖವಾಗಿ ಸ್ವಾಭಾವಿಕ ಬಂಡೆಯಲ್ಲಿ ಖಂಡರಿಸಿದ್ದು ಈ ಪರಿಸರದ ಅತಿ ದೊಡ್ಡ ವಿಘ್ನೇಶ್ವರನ ಶಿಲ್ಪ ಎನಿಸಿದೆ ಈ ಶಿಲ್ಪವು ೨ ಅಡಿ ಅಗಲ ೨ ೧/೨ ಉದ್ದ ಒಳಗೊಂಡಿದೆ. ಅದೇ ರೀತಿಯಲ್ಲಿ ಚನ್ನರಾಯನದುರ್ಗದ ಮಧುಗಿರಿ ಕೋಟೆ ಬಾಗಿಲ ಲಲಾಟದಲ್ಲಿ ಗಣೇಶನ ಶಿಲ್ಪ ಕೆತ್ತಲಾಗಿದ್ದು ಅತ್ಯಂತ ಸುಂದರವಾಗಿದೆ.

ನಂದಿ ಶಿಲ್ಪಗಳು ಶಿವ ದೇವಾಲಯಗಳಲ್ಲಿ ಸಾಮಾನ್ಯವಾಗಿ ಕಾಣಬಹುದು. ಕೆಲವು ದೇವಾಲಯಗಳಲ್ಲಿ ಅಪರೂಪಕ್ಕೆ ಕಂಡುಬರುವುದಿಲ್ಲ. ನಂದಿಗಳು ಕೆಲವು ಅಲಂಕೃತ ರಹಿತವಾಗಿರುತ್ತವೆ. ಈ ರೀತಿಯ ನಂದಿಯನ್ನು ಚನ್ನರಾಯನದುರ್ಗ ಪರಿಸರದಲ್ಲಿ ಕಂಡು ಬರುವ ತುಂಬಾಡಿ ಗ್ರಾಮದ ನಂದೀಶ್ವರ

ದೇವಾಲಯದಲ್ಲಿದೆ. ಈ ಶಿಲ್ಪವು ಹೆಚ್ಚು ಅಲಂಕೃತವಾಗಿದೆ. ತಲೆಯನ್ನು ಬಾಗಿಸಿ ತನ್ನ ಬಲಗಾಲನ್ನು ಮುಂದಕ್ಕೆ ಚಾಚಿ ಎಡಗಾಲನ್ನು ಮಡಿಚಿ ಮಲಗಿದ ರೀತಿಯಲ್ಲಿ ಕೆತ್ತಲಾಗಿದೆ. ಕೊರಳಿಗೆ ಗಂಟೆ ಮಾಲೆ ಧರಿಸಿದ್ದು ಬೆನ್ನಿಗೆ ನಡು ಪಟ್ಟಿಯನ್ನು ಕಟ್ಟಲಾಗಿದ್ದು ಕೊಂಬುಗಳನ್ನು ಒಳಗೊಂಡಿಲ್ಲ. ಕೊರಟಗೆರೆಯ ಗವಿ ಗಂಗಾಧರೇಶ್ವರ ದೇವಾಲಯದ ಸುಖನಾಸಿಯಲ್ಲಿರುವ ನಂದಿಯೂ ಸಹ ಸಾಧಾರಣ ಕೆತ್ತನೆಯಿಂದ ಕೂಡಿದೆ ಹಾಗು ಜುಂಜರಾಮನ ಹಳ್ಳಿಯ ಮಲ್ಲೇಶ್ವರ ದೇವಾಲಯದ ಸುಖನಾಸಿಯಲ್ಲಿನ ನಂದಿ ವಿಗ್ರಹವೂ ಕೂಡ ಇದೇ ರೀತಿಯಲ್ಲಿ ಖಂಡರಿಸಲಾಗಿದೆ.

ಬಂಡೇಹಳ್ಳಿಯ ಗಂಗಾಧರೇಶ್ವರ ಗುಹೆಯು ಶಿಲ್ಪಗಳ ಕೆತ್ತನೆ ಆಗರ ಎಂದರೇ ತಪ್ಪಾಗಲಾರದು ಈ ಗುಹೆಯಲ್ಲಿ ಸುಮಾರು ೧೦ ಕ್ಕೂ ಹೆಚ್ಚು ಶಿಲ್ಪಗಳು ಇರುವುದನ್ನು ನೋಡಬಹುದು.ಅವುಗಳಲ್ಲಿ ಲಕ್ಷ್ಮೀ ವಿಗ್ರಹವು ಒಂದಾಗಿದೆ. ಈ ವಿಗ್ರವು ಕ್ಷೇತ್ರ ಕಾರ್ಯದಲ್ಲಿ ದೊರೆತಿದ್ದು ೧/೨ ಅಡಿ ಎತ್ತರವಿದೆ. ಕೆಂಪು ಮಿಶ್ರಿತ ಗ್ರ್ಯಾನೈಟ್ ಕಲ್ಲಿನಲ್ಲಿ ಕೆತ್ತಲಾಗಿದೆ. ಚತುರ್ಭಜಧಾರಿಯಾದ ಶಿಲ್ಪವು ಪೀಠದ ಮೇಲೆ ಲಲಿತಾಸನದಲ್ಲಿ ಕುಳಿತಿದ್ದು, ತನ್ನ ಕೈಗಳಲ್ಲಿ ಪದ್ಮ ಕೈಬಳೆ ತೋಳುಬಂದಿ, ಸರಮಾಲೆ ಧರಿಸಲಾಗಿದೆ.

**ಆಂಜನೇಯನ ಮೂರ್ತಿಗಳು**

ಚನ್ನರಾಯನದುರ್ಗ ಪರಿಸರದಲ್ಲಿ ಆಂಜನೇಯ ಮೂರ್ತಿಗಳು ಎತೇಚ್ಛವಾಗಿ ಕಂಡು ಬರುತ್ತವೆ.ಈ ಶಿಲ್ಪಗಳಲ್ಲಿ ಶಿಲೆಗಳಿಂದ ಕಂಡಸಿದಂತ ಉಬ್ಬು ಶಿಲೆಗಳಾಗಿವೆ. ಇಲ್ಲಿ ಪ್ರಮುಖವಾಗಿ ಪಾಳೆಗಾರರ ಕಾಲದಲ್ಲಿ ನಿರ್ಮಿಸಲಾದ ಸಂತೆ ಬೀದಿ ಆಂಜನೇಯ ಶಿಲ್ಪವು ಚನ್ನರಾಯನದುರ್ಗದ ಕೋಟೆಯಲ್ಲಿ ಮಧುಗಿರಿ ಬಾಗಿಲಿನ ಬಳಿ ಸ್ವಾಭಾವಿಕ ಬಂಡೆಯ ಮೇಲೆ ಕಂಡರಿಲಾಗಿದೆ. ಇದು ಪೂರ್ವಭಿಮುಖವಾಗಿದೆ. ಹಾಗು ಇದೇ ಪರಿಸರದ ಕುರಂಕೋಟೆಯ ದೊಡ್ಡರಾಯಪ್ಪ ದೇವಾಲಯದ ಮೂರ್ತಿ ಈ ಪರಿಸರದ ದೊಡ್ಡ ಮೂರ್ತಿಯಾಗಿದೆ. ಅಲ್ಲದೆ ಮಣ್ಣಿನ ಕುರಿಕೆಯ ಆಂಜನೇಯ ಮೂರ್ತಿಯು ಕೂಡ ಶಿಲೆಯಿಂದ ನಿರ್ಮಿಸಲಾಗಿದ್ದು, ಪಾಳೆಗಾರರ ಕಾಲದಲ್ಲಿ ಸ್ಥಾಪಿಸಲಾಗಿದೆ. ಸಾಮಾನ್ಯವಾಗಿ ಈ ಮೂರ್ತಿಗಳು ದಕ್ಷಿಣಾಭಿಮುಖವಾಗಿ ಪೂರ್ವಕ್ಕೆ ಮುಖ ಮಾಡಿ ನಿಂತಿವೆ. ಅದರೆ ಚನ್ನರಾಯನದುರ್ಗದ ಮೂರ್ತಿಯು ಪೂರ್ವಾಭಿಮುಖವಾಗಿ ಊತ್ತರಕ್ಕೆ ಮುಖ ಮಾಡಿರುವುದು ವಿಶೇಷವಾಗಿದೆ. ಈ ಪರಿಸರದಲ್ಲಿ ಮೂರು ಅಡಿಗಳಿಂದ ೭ಅಡಿ ಎತ್ತರದ ಮೂರ್ತಿಗಳನ್ನು ಕಾಣಬಹುದು. ಚನ್ನರಾಯನದುರ್ಗದ ಪರಿಸರದಲ್ಲಿ ಕಂಡು ಬರುವ ಅತ್ಯಂತ ದೊಡ್ಡ ಮೂರ್ತಿ ಎಂದರೆ ಕುರಂಕೋಟೆಯ ಬಳಿಯ ಕುರಂಗರಾಯನು ನಿರ್ಮಿಸಿರುವ ದೊಡ್ಡರಾಯಪ್ಪ ದೇವಾಲಯದ ಮೂರ್ತಿ. ಇದು ೭ ಅಡಿ ಎತ್ತರ ಒಳಗೊಂಡಿದ್ದು ಇಂದಿಗೂ ಪೂಜೆ ನಡೆಯುತ್ತದೆ. ಅದೇ ರೀತಿ ಮಣುವಿನಕುರಿಕೆಯಲ್ಲಿನ ಆಂಜನೇಯನ ಶಿಲ್ಪವು ೬ ಅಡಿ ಎತ್ತರ ೩ ಅಡಿ ಅಗಲ ಹೊಂದಿದ್ದು, ಮೂರ್ತಿಯ ಪ್ರಮುಖ ಲಕ್ಷಣವೆಂದರೆ

ಕಿವಿಯಲ್ಲಿ ಕುಂಡಲಗಳನ್ನು ಧರಿಸಿದ್ದು ಕಂಠಿಹಾರ ಸೊಂಟದಲ್ಲಿ ಹಾಗು ಕಂಠದಲ್ಲಿ ಹಲವು ಹಾರಗಳನ್ನು ಧರಿಸಿದೆ. ಯಜ್ಞೋಪವಿತ ಮೂರ್ತಿಯನ್ನು ಇಲ್ಲಿ ಕಾಣಬಹುದು.ಮಣಿಸರಗಳಿಂದ ಅಲಂಕರಿಸುವ ದೋತಿ ಇದೆ. ಭುಜದ ಮೇಲು ಮಣಿಸರಗಳಿಂದ ಅಲಂಕರಿಸಿದ ವಸ್ತ್ರವಿದೆ. ಬಲಗೈಯನ್ನು ಮೇಲೆತ್ತಿರುವಂತಿದೆ. ಎಡಗೈಯಲ್ಲಿ ಪಾಶವನ್ನು ಹಿಡಿಯುವಂತೆ ಖಂಡರಿಸಲಾಗಿದೆ. ಕೈಯಲ್ಲಿ ಕೈಕಡಗ , ಭುಜಕೀರ್ತಿ ಕೇಯಾರಗಳನ್ನು ಹಾಗು ಕಾಲಲ್ಲಿ ಕಾಲ್ಗಡಗ ಪಾದರಕ್ಷೆಗಳನ್ನು ಕೆತ್ತಲಾಗಿದೆ.

ಈ ರೀತಿಯಾಗಿ ಚನ್ನರಾಯನದುರ್ಗ ಪರಿಸರದಲ್ಲಿ ಚಾಲುಕ್ಯರ ಕಾಲದಿಂದ ಪಾಳೆಗಾರರ ಕಾಲವಧಿಯವರೆಗೂ ನಿರ್ಮಿಸಲ್ಪಟ್ಟಂತಹ ಮೂರ್ತಿಶಿಲ್ಪಗಳಾಗಿವೆ.ಇವುಗಳನ್ನು ನಿರ್ಮಿಸಿದಂತಹ ಶಿಲೆ ಹಾಗು ಶಿಲ್ಪಗಳ ಲಕ್ಷಣಗಳಿಂದ ಅವುಗಳ ಕಾಲವನ್ನು ಗುರುತಿಸಬಹುದಾಗಿದೆ.

## ೨. ಗಾರೆ ಶಿಲ್ಪಗಳು

ಗಾರೆಯ ಬಳಕೆಯು ಹೆಚ್ಚಾಗಿ ವಿಜಯನಗರದ ಕಾಲದಲ್ಲಿ ಬಳಸಿರುವುದು ಕಾಣಬಹುದಾಗಿದೆ. ಗಾರೆಯನ್ನು ಕಟ್ಟಡ ಕೋಟೆ, ದೇವಾಲಯಗಳು, ಶಿಲ್ಪಗಳು ಮುಂತಾದವುಗಳನ್ನು ನಿರ್ಮಿಸಲು ಬಳಸುವ ಒಂದು ಸಾಮಗ್ರಿಯಾಗಿದೆ. ಗಾರೆಯ ಬಳಕೆಯಿಂದ ಕಲಾ ಮಾದ್ಯಮವಾಗಿ ಬೆಳೆದದ್ದನ್ನು ನಾವು ಪ್ರಾಚೀನ ಕಾಲದಿಂದಲೇ ನೋಡಬಹುದಾಗಿದೆ. ಹರಪ್ಪ ಮೆಹೆಂಜೋದಾರೊಗಳಲ್ಲಿ ಗಾರೆಯನ್ನು ಬಳಸಿರುವುದು ಸ್ಪಷ್ಟವಾಗಿದ್ದು, ಇದರ ಕಾಲ ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಿಂದಿನದ್ದು ಎಂದು ಇತಿಹಾಸ ತಜ್ಞರು ಗುರುತಿಸಿದ್ದಾರೆ. ಕುಶಾನರ ಕಾಲದ ಗಾಂಧಾರ ಶೈಲಿಯಲ್ಲಿ ಬೌದ್ಧ ಧರ್ಮಕ್ಕೆ ಸೇರಿದ ಹಲವು ಬಿಡಿ ಆಕೃತಿಗಳು ಮತ್ತು ಕಥಾನಕ ಆಕೃತಿಗಳು ಕಂಡು ಬರುತ್ತವೆ. ಶಾತವಾಹನರ ಕಾಲದಲ್ಲಿ ಹಾಗು ಗುಪ್ತ ವಾಕಟಕರ ರಾಜ ಮನೆತನದವರು ನಿರ್ಮಿಸಿದ ಬೌದ್ಧ,ಚೈತ್ರ ವಿಹಾರಗಳಲ್ಲಿನ ಭಿತ್ತಿ ಚಿತ್ರಗಳ ಹಿನ್ನೆಲೆಯ ಲೇಪನವಾಗಿ ಗಾರೆ ಬಳಸಿದ್ದಾರೆ. ನಂತರ ೧೩-೧೪ ನೇ ಶತಮಾನದಲ್ಲಿ ಇದರ ಪ್ರಭಾವ ಹೆಚ್ಚಾಯಿತು.

ಮುಸ್ಲಿಂ ಅರಸರ ಆಳ್ವಿಕೆಯ ಸಂದರ್ಭದಲ್ಲಿ ಗಾರೆಯನ್ನು ಹೆಚ್ಚು ಬಳಸಿದರು. ಅವರು ಮಹಾದ್ವಾರ, ಮಸೀದಿ, ಗೋಡೆ ಅಲಂಕಾರಕ್ಕೆ ಗಾರೆ ಬಳಸಿದರು. ಹೀಗೆ ಪ್ರಾರಂಭವಾದ ಗಾರೆಯ ಉಪಯೋಗ ಕಾಲಕ್ರಮೇಣ ವಿಜಯನಗರ ಕಾಲದಲ್ಲಿ ಶಿಲೆಗೆ ಪರ್ಯಾಯವಾಗಿ ಇಟ್ಟಿಗೆ ತಯಾರಿಸಿ ಪ್ರಮುಖ ಮಾದ್ಯಮವಾಗಿ ಬಳಸಿದರು. ಇಂತಹ ಗಾರೆಯನ್ನು ಮುಖ್ಯವಾಗಿ ಸುಣ್ಣ ಮರಳು, ನೀರು ಕೆಲವು ಅಂಟುದ್ರವಗಳು, ಲೋಳೆರಸ, ಬಿಲ್ವಪತ್ರೆಕಾಯಿ, ಬೆಲ್ಲ, ಮೊಟ್ಟೆಗಳನ್ನು ಉಪಯೋಗಿಸುತ್ತಿದ್ದರು. ಎಲ್ಲವನ್ನು ಹದಕ್ಕೆ ತಕ್ಕಂತೆ ಹಾಕಿ ರುಬ್ಬಬೇಕು. ಈ ವಿಧಾನದ ಮೂಲಕ ಗಾರೆಯನ್ನು ತಯಾರಿಸಿಕೊಳ್ಳುತ್ತಿದ್ದರು.[೧೯]

ವಿಜಯನಗರ ಹಾಗು ಪಾಳೆಗಾರರ ಕಾಲದ ಕಲಾವಿದರು ಗಾರೆಯನ್ನು ಉಪಯೋಗಿಸಿ ಕಲಾತ್ಮಕವಾದ ಆಕೃತಿಗಳನ್ನು ನಿರ್ಮಿಸಿರುವುದನ್ನು ನೋಡಬಹುದಾಗಿದೆ. ಸಾಮಾನ್ಯವಾಗಿ ಇವು ಬಿಡಿ ಆಕೃತಿಗಳಲ್ಲಿ

ಗೋಡೆಗೆ ಅಂಟಿಕೊಂಡಂತೆ ರಚಿಸಿದ್ದಾರೆ. ಇವುಗಳು ಹೆಚ್ಚು ಮುಖ್ಯ ಶಿಲ್ಪಗಳ ಮಾದರಿಯ ರಚನೆಯನ್ನು ಕಾಣಬಹುದಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ,

ಕೊರಟಗೆರೆಯ ಗವಿಗಂಗಾಧರೇಶ್ವರ ದೇವಾಲಯದ ಮುಖ್ಯ ದ್ವಾರದ ಮೇಲ್ಭಾಗದಲ್ಲಿ ೪ ೧/೨ ಅಡಿ ಎತ್ತರ ಹೊಂದಿದ್ದು ಗಾರೆಯಿಂದ ನಿರ್ಮಿಸಿದ ನಂದಿಶಿಲ್ಪವನ್ನು ನೋಡಬಹುದು. ಈ ನಂದಿ ವಿಗ್ರಹವು ದಷ್ಟ ಪುಷ್ಟ ದೇಹ ಹೊಂದಿದ್ದು ಕೊರಳಿಗೆ ಗಂಟೆಯ ಮಾಲೆ ಅದರ ಮೇಲೆ ಚಿಕ್ಕ ಗಾತ್ರದ ಗಂಟೆ ಮಾಲೆಯನ್ನು ಹಾಕಿದಂತೆ ನಿರ್ಮಿಸಿದ್ದಾರೆ. ತನ್ನ ಎರಡು ಕೊಂಬುಗಳಿಗೆ ಕಳಶವಿಟ್ಟು ಕೊಂಬನ್ನು ಬಳಸಿ ಬಂದ ರೀತಿಯಲ್ಲಿ ಸರವನ್ನು ಕೆತ್ತಲಾಗಿದೆ. ತನ್ನ ಎರಡು ಕಿವಿಗಳನ್ನು ನಿಮಿರಿ ತನ್ನ ಸೂಕ್ಷ್ಮ ಕಣ್ಣುಗಳಿಂದ ಯಾವುದೇ ವಸ್ತುವನ್ನು ದಿಟ್ಟಿಸಿ ನೋಡುತ್ತಿರುವ ರೀತಿಯಲ್ಲಿ ರಚಿಸಲಾಗಿದೆ. ಈ ಶಿಲ್ಪ ತನ್ನ ಎಡಗಾಲನ್ನು ಮುಂದೆ ಚಾಚಿ ಮಡಿಸಿ ಬಲಗಾಲನ್ನು ಹಿಂದಕ್ಕೆ ಹಾಕಿಕೊಂಡು ಮಲಗಿದಂತೆ ಇದೆ. ನಂದಿಯ ಎದೆಯ ಭಾಗದಲ್ಲಿ ಅರಳಿದ ಹೂವನ್ನು ಬಿಡಿಸಲಾಗಿದೆ. ಈ ವಿಗ್ರಹವು ಪೂರ್ವಾಭಿಮುಖವಾಗಿದ್ದು ಗೋಪುರವು ಎತ್ತರವಾಗಿದೆ. ಕೊರಳಿಗೆ ಧಾರ ಧರಿಸಿದಂತೆ ಕೆತ್ತನೆ ಇದೆ. ಕಾಲಿಗೆ ಕಾಲ್ಗಡಕ ಹೊಂದಿದ್ದು ತನ್ನ ಬಾಲವನ್ನು ಬಲಗಾಲಿನ ಮೇಲೆ ಇಟ್ಟಂತೆ ಖಂಡರಿಸಲಾಗಿದೆ.

ಅದೇ ರೀತಿ ಚನ್ನರಾಯನದುರ್ಗದ ಈಶ್ವರ ದೇವಾಲಯದ ಭಾವಣಿ ಮೇಲ್ಭಾಗದ ೪ ಮೂಲೆಗಳಲ್ಲಿಯೂ ನಂದಿ ವಿಗ್ರಹಗಳನ್ನು ಕೆತ್ತಲಾಗಿದೆ. ಈ ಶಿಲ್ಪ ತನ್ನ ಕಾಲುಗಳನ್ನು ಹಿಂದಕಿಟ್ಟು ಮಲಗಿದ ರೀತಿಯಲ್ಲಿ ನಿರ್ಮಿಸಲಾಗಿದೆ. ನಂದಿಯ ಶಿರವು ಗಾಳಿ ಮಳೆಯ ಕಾರಣ ತುಂಡರಿಸಿದ ರೀತಿ ನಾಶವಾಗಿದೆ. ಈ ನಂದಿಯು ಹೆಚ್ಚು ಅಲಂಕೃತವಾಗಿದೆ. ಅದೇ ರೀತಿ ಹೊಲತಾಳುವಿನ ಬಸವಣ್ಣ ದೇವಾಲಯ ಮೇಲ್ಚಾವಣಿಯ ಮೇಲೆ ನಂದಿ ವಿಗ್ರಹ ರಚಿಸಿದ್ದು ಹೆಚ್ಚು ಅಲಂಕೃತವಾಗಿದೆ. ಕೊರಳಿಗೆ ಗೆಜ್ಜೆ, ಎರಡು ಸರಮಾಲೆ ಹಾಕಿದ್ದು ಬೆನ್ನಿನ ಮೇಲೆ ವಸ್ತ್ರವನ್ನು ಕೆತ್ತಲಾಗಿದೆ.

ಚನ್ನರಾಯನದುರ್ಗ ಬೆಟ್ಟದ ಕೆಳಭಾಗದಲ್ಲಿ ಮುರಾರಿ ಮಠವಿದ್ದು, ಇದನ್ನು ಮಧುಗಿರಿ ಪಾಳೆಗಾರರ ಕಾಲದಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯ ತೆರೆದ ಮಂಟಪ ಹೊಂದಿದ್ದು ಮುರಾರಿ ಸ್ವಾಮಿಯ ಜೀವಂತ ಸಮಾಧಿ ಇದರಲ್ಲಿ ಇದೆ. ತೆರೆದ ಮಂಟಪದ ಮೇಲ್ಭಾಗದ ಭಾವಣಿಯಲ್ಲಿ ೪ ಕೋಷ್ಟಕಗಳನ್ನು ಸಾಲಾಗಿ ನಿರ್ಮಿಸಲಾಗಿದೆ. ಈ ಕೋಷ್ಟಕದಲ್ಲಿ ಸ್ತ್ರೀಯು ತನ್ನ ಬಲಗಾಲನ್ನು ನೆಲಕ್ಕೂರಿ ಕುಳಿತ ಶಿಲ್ಪವನ್ನು ರಚಿಸಲಾಗಿದ್ದು, ತನ್ನ ಕೈಗಳು ಕತ್ತರಿಸಿದ ರೀತಿಯಲ್ಲಿ ಶಿಥಿಲವಾಗಿದೆ. ಮತ್ತೊಂದು ಕೋಷ್ಟಕದಲ್ಲಿ ಸ್ತ್ರೀಯು ಭಂಗಿಯಲ್ಲಿರುವ ೧ ೧/೨ ಅಡಿ ಎತ್ತರದ ಶಿಲ್ಪ ಒಳಗೊಂಡಿದ್ದಾರೆ. ಈ ಶಿಲ್ಪ ಯಾವುದೇ ಅಲಂಕಾರಕ್ಕೆ ಒಳಗಾಗಿಲ್ಲ. ಅದರಂತೆ ಪಕ್ಕದ ಕೋಷ್ಟಕದಲ್ಲಿ ಶಿಲ್ಪವು ವೇದಿಕೆಯ ಮೇಲೆ ಲಲಿತಾಸನದಲ್ಲಿ ಕುಳಿತ ರೀತಿ ನಿರ್ಮಿಸಲಾಗಿದೆ.

೪ ನೇ ಕೋಷ್ಠಕದಲ್ಲಿ ಗಾಢವಾದ ಯೋಚನೆಯಲ್ಲಿ ತೊಡಗಿದ ರೀತಿಯಲ್ಲಿ ತನ್ನ ಬಲಗೈಯನ್ನು ಗಲ್ಲರ ಮೇಲಿಸಿದ ಹಾಗೆ ಕೆತ್ತಲಾಗಿದೆ. ಈ ಶಿಲ್ಪ ಕೊರಳಲ್ಲಿ ಹಾರ ಧರಿಸಿದ್ದು ಕೈ ಬಳೆ ಹಾಕಿದ್ದು , ಎಡಗಾಲಿನ ಮೇಲೆ ಕೈ ಇಟ್ಟು ಯೋಜನೆ ಮಾಡುವ ರೀತಿಯಲ್ಲಿ ಕೆತ್ತಲಾಗಿದೆ. ಮತ್ತೊಂದು ಶಿಲ್ಪವು ಕೇಶಾಲಂಕಾರ ಹೊಂದಿದ್ದು ಲಲಿತಾಸನದಲ್ಲಿ ಕುಳಿತ ರೀತಿಯಲ್ಲಿ ಕೆತ್ತಲಾಗಿದೆ. ಈ ಕೋಷ್ಠಕಗಳ ಮಧ್ಯಭಾಗದಲ್ಲಿ ಮನುಷ್ಯನ ದೇಹ ಹಾಗು ಕಪಿಯ ಮುಖ ಹೊಂದಿದ ಶಿಲ್ಪಗಳನ್ನು ಕೆತ್ತಲಾಗಿದೆ.

**೩. ಲೋಹ ಶಿಲ್ಪಗಳು**

ಕಂಚು ಎಂದ ಮಾತ್ರಕ್ಕೆ ಕೇವಲ ಒಂದೇ ಲೋಹ ಸೇರಿರುವುದಿಲ್ಲ. ಇದಕ್ಕೆ ಬದಲಾಗಿ ತಾಮ್ರ, ಬೆಳ್ಳಿ ಬಂಗಾರ, ಹಿತ್ತಾಳೆ, ಬಿಳಿಸೀಸ ಎಂಬ ಐದು ಲೋಹಗಳಿಂದ ತಯಾರಿಲ್ಪಟ್ಟಿದ್ದು, ತಾಮ್ರ ಲೋಹವನ್ನು ಪಂಚಲೋಹವೆನ್ನುತ್ತಾರೆ.[೨೦] ಹೀಗೆ ತಯಾರಿಸಿದ್ದನ್ನು ಕಂಚು ಎನ್ನುತ್ತಾರೆ. ಜೇಡಿ ಮಣ್ಣಿನ ಮೂರ್ತಿಗಳಿಗೆ ಮೇಣವನ್ನು ಲೇಪಿಸಿ ಅದನ್ನು ಬಿಸಿಲಿನಲ್ಲಿ ಒಣಗಿಸಿದ ನಂತರ ಸುಟ್ಟಾಗ ಉತ್ತಮ ಮೂರ್ತಿಗಲು ಸಿದ್ಧವಾಗುತ್ತವೆ. ಈ ವಿಧಾನದಿಂದ ಲೋಹ ಮೂರ್ತಿಗಳನ್ನು ತಯಾರಿಸಿ ನೀರಿನಿಂದ ತೊಳೆಯಬೇಕೆಂದು ಶಿಲ್ಪ ಶಾಸ್ತ್ರವು ತಿಳಿಸುತ್ತದೆ.[೨೧]

ಭಾರತದಲ್ಲಿ ಬಹಳ ಹಿಂದೆಯೇ ಕಂಚಿನ ಮೂರ್ತಿಗಳು ಕ್ರಿ.ಪೂ. ೨ ನೇ ಶತಮಾನದಲ್ಲಿ ಹರಪ್ಪ ಸಂಸ್ಕೃತಿಯ ಸ್ತ್ರೀ ಮೂರ್ತಿಯೊಂದು ದೊರೆತಿದ್ದರಿಂದ ಇದರ ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ. ನಮ್ಮ ಪೂರ್ವಜರು ಲೋಹವನ್ನು ಮತ್ತೆ ಮತ್ತೆ ಕರಗಿಸಿ ಉಪಯೋಗಿಸುತ್ತಿದ್ದರಿಂದ ಹಳೆಯ ಲೋಹದ ವಸ್ತುಗಳು ದೊರೆಯುವುದು ಅಪರೂಪ. ದಕ್ಷಿಣ ಭಾರತದಲ್ಲೂ ಲೋಹ ಕಲೆ ಸಾಕಷ್ಟು ಪ್ರವರ್ಧಮಾನಕ್ಕೆ ಬಂದಿದ್ದು ತಮಿಳು ನಾಡಿದ ಅದಿ ಚೆನ್ನನೂರು ಉತ್ಖನನದಲ್ಲಿ ದೊರೆತಿದೆ. ಇದು ಕ್ರಿ.ಪೂ. ೨೦೦೦ ರಷ್ಟು ಹಳೆಯದಾದ ಮಾತೃದೇವತೆ ಎನ್ನಲಾಗಿದೆ.[೨೨]

ಕರ್ನಾಟಕದಲ್ಲಿ ಗಂಗರು ನೊಳಂಬರ ಕಾಲದಲ್ಲಿನ ಕಂಚಿನ ಪ್ರತಿಮೆಗಳು ಹೆಚ್ಚಾಗಿ ದೊರೆತರೂ ಅಷ್ಟೊಂದು ಅಲಂಕಾರ ಕಂಡು ಬಂದಿಲ್ಲ.ಚಾಲುಕ್ಯರು ಹೊಯ್ಸಳರ ಕಾಲದಲ್ಲಿ ವಾಸ್ತುಶಿಲ್ಪದ ಪರ್ವಕಾಲವಾಗಿದ್ದು, ಹಲವು ಮೂರ್ತಿಗಳು ದೊರೆತಿವೆ. ಕರ್ನಾಟಕದಲ್ಲಿ ಕಂಚಿನ ಶಿಲ್ಪಗಳ ಸುವರ್ಣಯುಗವನ್ನು ವಿಜಯನಗರದ ಕಾಲದಲ್ಲಿ ಕಾಣಬಹುದಾಗಿದೆ. [೨೩] ಈ ಶೈಲಿ ಪಾಳೆಗಾರರ ಕಾಲದಲ್ಲೂ ಮುಂದುವರೆಯಿತು. ಇಂತಹ ಮೂರ್ತಿಗಳನ್ನು ಚನ್ನರಾಯನದುರ್ಗ ಪರಿಸರದಲ್ಲೂ ಕಾಣಬಹುದಾಗಿದೆ.

ತೋವಿನಕೆರೆಯಲ್ಲಿ ಪ್ರಾಚೀನ ಚಂದ್ರಪ್ರಭ ಜೈನ ಬಸದಿ ಇದೆ. ಇಲ್ಲಿಯ ಬಸದಿಯಲ್ಲಿ ತೀರ್ಥಂಕರರಾದ ಚಂದ್ರಪ್ರಭ ಮೂರ್ತಿಗಳ ಕಂಚಿನ ಶಿಲ್ಪವು ಒಂದು ಅಡಿ ಎತ್ತರದಲ್ಲಿ ಇರುವುದನ್ನು ಕಾಣಬಹುದು. ಈ ಶಿಲ್ಪವು ನಿಂತು ತಪಸ್ಸು ಮಾಡುವಂತೆ ಶಾಂತ ಸ್ವಭಾವದ ದೃಢಕಾಯ ದೇಹವನ್ನು ಹೊಂದಿದೆ. ಮೂರ್ತಿಯ ಮುಖದಲ್ಲಿ ಮಂದಹಾಸ ಉದ್ದನೆಯ ನಾಸಿಕ ಕೇಶ ಕುಂಡಲವನ್ನು ಒಳಗೊಂಡಂತೆ ನಿರ್ಮಿಸಲಾಗಿದೆ. ಭುಜಗಳು ನೇರವಾಗಿದ್ದು, ತನ್ನ ಕೈಗಳನ್ನು ಕಾಲುಗಳ ಪಕ್ಕದಲ್ಲಿ ನೇರವಾಗಿ ನೀಡಿದ ರೀತಿಯಲ್ಲಿವೆ. ಈ ಶಿಲ್ಪವು ವೇದಿಕೆಯ ಮೇಲೆ ಖಂಡರಿಸಲಾಗಿದ್ದು ಸುಮಾರು ೮ ನೇ ಶತಮಾನದ ಶಿಲ್ಪವಾಗಿದೆ.

ಕೊರಟಗೆರೆ ತಾಲ್ಲೂಕಿನ ಪ್ರಮುಖ ಗ್ರಾಮಗಳಲ್ಲಿ ಶಂಭೋನಹಳ್ಳಿಯು ಒಂದಾಗಿದೆ. ಇಲ್ಲಿ ಪ್ರಾಚೀನ ಭೈರವೇಶ್ವರ ದೇವಾಲಯವಿದೆ. ಇದು ಪಾಳೆಗಾರರ ಕಾಲದಲ್ಲಿ ನಿರ್ಮಾಣವಾಗಿದ್ದು, ಇಲ್ಲಿನ ಮೂರ್ತಿಯು ಕಂಚಿನಿಂದ ನಿರ್ಮಿಸಲಾಗಿದೆ. ಶಿಲ್ಪವು ೧ ೧/೨ ಅಡಿ ಎತ್ತರ ಹೊಂದಿದ್ದು ನೀಳ ಕಣ್ಣು ಕೇಶಲಂಕಾರ , ಮೀಸೆಯನ್ನು ಒಳಗೊಂಡ ಶಿಲ್ಪವಾಗಿದೆ. ಕಿವಿಗೆ ಕುಂಡಲ ಧರಿಸಿದ್ದು ಕೇವಲ ಶಿರವನ್ನು ಮಾತ್ರ ನಿರ್ಮಿಸಲಾಗಿದೆ. ಈ ಶಿಲ್ಪದ ಪಕ್ಕದಲ್ಲಿ ಉತ್ಸವ ಮೂರ್ತಿ ಶಿಲ್ಪವನ್ನು ದೇವಾಲಯದ ಜೀರ್ಣೋದ್ಧಾರದ ನಂತರ ಪ್ರತಿಷ್ಠಾಪಿಸಲಾಗಿದ್ದು, ಲತಾಸನದಲ್ಲಿ ಕುಳಿತ ಭೈರವನು ಆಯುಧ ಪಿಡಿದು ಚತುರ್ಭುಜನದಾರಿಯಾಗಿ ಕುಳಿತಂತೆ ಶಿಲ್ಪ ಒಳಗೊಂಡಿದೆ. ಈ ಶಿಲ್ಪ ಕಂಚಿನಿಂದ ನಿರ್ಮಿಸಿದ್ದು ೨ ಅಡಿ ಎತ್ತರ ಹೊಂದಿದ್ದು ತ್ರಿಶೂಲ ಹಿಡಿದಂತೆ ಖಂಡರಿಸಲಾಗಿದೆ.

## ಅಡಿ ಟಿಪ್ಪಣಿ

೧. ಮೂರ್ತಿ ಕೆ. ಎಲ್.ಎನ್., ೧೯೯೮ :,ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪು. ೪೮

೨. ಗೋಪಾಲ . ಬಾ.ರಾ., ೧೯೯೩ : , ಕರ್ನಾಟಕದ ಕಲೆಗಳು, ಪು. ೧

೩. ಪ್ರಭಾಕರ. ಎಂ.ಎನ್.,೨೦೦೨ : ದೇವಾಲಯ ವಾಸ್ತು ಚಂದ್ರಿಕೆ, ಪು. ೧-೨

೪. ಗೋಪಾಲ್ ಬಾ.ರಾ., ೧೯೯೩ : ಪೂರ್ವೋಕ್ತ ., ಪು. ೧

೫. ಅದೇ ಪು.೧

೬. ಅದೇ ಪು. ೯

೭. ಸುರೇಶ್. ಕೆ.ಎಂ., ೧೯೯೯ : , ಕರ್ನಾಟಕ ದೇವಾಲಯ ಕೋಶ. ಕೊಪ್ಪಳ ಜಿಲ್ಲೆ, ಪು. ೯

೮. ರಾಜಾರಾಂ ಹೆಗಡೆ , ೧೯೯೨ : ,ಭಾರತೀಯ ಮೂರ್ತಿ ಶಾಸ್ತ್ರ, ಸಂ.೨, ಪು. ೫೫

೯. ರಾಜಾರಾಂ ಹೆಗಡೆ , ೧೯೯೨:, ಪೂರ್ವೋಕ್ತ , ಪು. ೩೬

೧೦. ತಿಪ್ಪೇರುದ್ರಸ್ವಾಮಿ ಹೆಚ್., ೧೯೯೭: , ಕನ್ನಡ ಸಂಸ್ಕೃತಿ ಸಮೀಕ್ಷೆ, ಪು. ೫೨೩

೧೧. ಮೂರ್ತಿ ಕೆ.ಎಲ್.ಎನ್. ೧೯೯೮ : ಪೂರ್ವೋಕ್ತ . ಪು. ೫೮

೧೨. ರಾಜಾರಾಂ ಹೆಗಡೆ, ೧೯೯೨:, ಪೂರ್ವೋಕ್ತ ಪು. ೪೩

೧೩. ತಿಪ್ಪೇರುದ್ರಸ್ವಾಮಿ ಹೆಚ್., ೧೯೯೭:, ಪೂರ್ವೋಕ್ತ , ಪು. ೫೩೭

೧೪. ಅದೇ ಪು. ೫೪೦

೧೫. ಅದೇ ಪು. ೫೪೨

೧೬. ಅದೇ ಪು. ೫೪೧

೧೭. ರಾಮಚಂದ್ರರಾವ್ ಎಸ್.ಕೆ., ೧೯೯೨: , ಪ್ರತಿಮಾ ಕೋಶ , ಸಂಪುಟ ೬,ಪು. ೨೧೩

೧೮. ಅದೇ ಪು. ೨೧೭

೧೯.ರಮೇಶ ಚಿ.ಗು., ೧೯೯೭: ಕರ್ನಾಟಕ ವಾಸ್ತುಶಿಲ್ಪ ,ಪು. ೩೧

೨೦.ಗಂಗೋಲಿ ಬಿ.ಸಿ. ೧೯೭೮: , ಸೌತ್ ಇಂಡಿಯನ್ ಬ್ರಾಂಜಸ್, ಪು. ೨೨

೨೧. ಅದೇ ಪು. ೩೨

೨೨. ಅದೇ ಪು. ೧೫

೨೩. ರಮೇಶ್ ಚಿ.ಗು., ೧೯೯೭ :, ಪೂರ್ವೋಕ್ತ , ಪು. ೩೧

## ಅಧ್ಯಾಯ -ಐದು

## ರಕ್ಷಣಾ ವಾಸ್ತುಶಿಲ್ಪ

ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ ಕೋಟೆ ಎಂದರೆ ಒಳಗಿರುವ ವ್ಯಕ್ತಿಗಳಿಗೆ ಮತ್ತು ವಸ್ತುಗಳಿಗೆ ಭದ್ರತೆಯನ್ನು ಒದಗಿಸುವುದಾಗಿದೆ. ವಿಶಾಲ ಅರ್ಥದಲ್ಲಿ ಹೇಳುವುದಾದರೆ ರಕ್ಷಣೆಯ ಆವರಣವುಳ್ಳ ಪ್ರದೇಶ ಎಂಬ ಅರ್ಥವನ್ನು ಕೊಡುತ್ತದೆ. ಕೋಟೆಯು ರಾಜನಿಗೆ ರಕ್ಷಣೆ ಒದಗಿಸುವ ಸುರಕ್ಷಿತವಾದ ಮಹತ್ವದ ಸ್ಥಳವಾಗಿದೆ ಎಂದರೆ ತಪ್ಪಾಗಲಾರದು.[೧] ರಾಜ್ಯಗಳು ಉದಯ ವಾಗುವುದಕ್ಕಿಂತಲೂ ಮುಂಚಿತವಾಗಿ ಜನರು ಚಿಕ್ಕಗ್ರಾಮಗಳಲ್ಲಿ ವಾಸಿಸುತ್ತಿದ್ದರು ಇಂತಹ ಸಂದರ್ಭದಲ್ಲಿ ತಮ್ಮನ್ನು ರಕ್ಷಿಸಿಕೊಳ್ಳುವ ಸಲುವಾಗಿ ಹಾಗು ವೈರಿಗಳು ಮತ್ತು ಕಳ್ಳರು ತಮ್ಮ ಸಂಪತ್ತನ್ನು ದೋಚುತ್ತಾರೆಂಬ ಭಯದಿಂದ ಅಲ್ಲದೆ ಕಾಡು ಪ್ರಾಣಿಗಳಿಂದ ತಮ್ಮನ್ನು ಸಂರಕ್ಷಿಸಿಕೊಳ್ಳಲು ಊರುಗಳ ಸುತ್ತಲೂ ಎತ್ತರವಾದ ಗೋಡೆಯನ್ನು ಕೋಟೆಯನ್ನು ಕಟ್ಟಲು ಪ್ರಾರಂಭಿಸಿದರು. ಇದಕ್ಕೂ ಮೊದಲು ಮರದ ಕೊಂಬೆಗಳಿಂದ ನಂತರದ ಕಾಲದಲ್ಲಿ ಮಣ್ಣಿನ ಗೋಡೆಯನ್ನು ಕಟ್ಟಲಾರಂಭಿಸಿದರು. ನಂತರ ಗ್ರಾಮಗಳು ಬೆಳೆದು ಪಟ್ಟಣಗಳಾದಂತೆ ಒಟ್ಟಾಗಿ ರಾಜ್ಯ ಸ್ಥಾಪನೆಯಾದ ಮೇಲೆ ಆಳುವ ರಾಜ ತನ್ನ ರಾಜ್ಯ ರಕ್ಷಿಸಿಕೊಳ್ಳಲು ಸುತ್ತಲು ಕೋಟೆಯನ್ನು ಕಟ್ಟಲಾರಂಬಿಸಿದರು. ಪ್ರಾಚೀನ ರಾಜನೀತಿ ತಜ್ಞರು ಒಂದು ರಾಜ್ಯಕ್ಕೆ ಅವಶ್ಯಕವಾಗಿ ಸಪ್ತಾಂಗಳು ಬೇಕು ಎಂದು ತಿಳಿಸಿದ್ದಾರೆ. ಸಪ್ತಾಂಗಗಳೆಂದರೆ ಪ್ರಭು, ಅಮಾತ್ಯ (ಮಂತ್ರಿ) ದುರ್ಗ, ಕೋಶ,ದಂಡ, ಸೈನ್ಯ ಮಿತ್ರ, ರಾಜ್ಯಗಳಾಗಿವೆ. ಸಪ್ತಾಂಗಳಲ್ಲಿ ಮುಖ್ಯವಾದದ್ದು ಎಂದರೆ ಕೋಟೆ.ಸಂಸ್ಕೃತ ಸಾಹಿತ್ಯದಲ್ಲಿ ಕೋಟೆಗಳನ್ನು ದುರ್ಗ ಎಂಬ ಹೆಸರಿನಿಂದ ಕರೆಯಲಾಗಿದೆ. ಇದರ ಅರ್ಥ ಹೊರಗಿನ ಶತ್ರುಗಳಿಂದ ಹಾಗು ಕ್ರೂರ ಪ್ರಾಣಿಗಳಿಂದ ರಕ್ಷಿಸಿಕೊಳ್ಳುವ ಸ್ಥಳವಾಗಿದೆ ಎನ್ನಬಹುದು. ದುರ್ಗಂ ಎಂಬ ಪದವು ಅಜೇಜ ಅಥವಾ ಗೆಲ್ಲಲಾಗದ ಕೋಟೆಗಳನ್ನು ಸೂಚಿಸುವುದಾಗಿದೆ.[೨] ಹಳಗನಾಡನಲ್ಲಿ 'ಕೊಂಟೆ' ಎಂಬ ಮೂಲರೂಪದಲ್ಲಿದ್ದು ಇದನ್ನು ಕೋಟೆ ಎಂದು ಹೊಸಗನ್ನಡದಲಿ ಕರೆಯುತ್ತಾರೆ. ಅದೇ ರೀತಿ ಕೋಟೆಗೆ ದುರ್ಗ, ಪುರ, ಜಿಲ್ಲೆ, ವಾಡಿ, ಪ್ರಾಕಾರ, ಗಡ ಎಂಬ ಪದಗಳಿಂದ ಕರೆಯುತ್ತಾರೆ. ಇಂಗ್ಲೀಷ್‌ನಲ್ಲಿ ಪೋರ್ಟ್ ಎಂತಲೂ ಕರೆಯುತ್ತಾರೆ. ಒಟ್ಟಾರೆಯಾಗಿ ಕೋಟೆ ರಾಜ್ಯಕ್ಕೆ ಹಾಗು ರಾಜನಿಗೆ ರಕ್ಷಣೆಯನ್ನು ಒದಗಿಸುವ ಅಂಶವಾಗಿದೆ.

ಪ್ರಾಚೀನ ಕಾಲದಿಂದಲೂ ರಕ್ಷಣೆಯ ದೃಷ್ಟಿಯಿಂದ ಕೋಟೆಗಳು ಮಹತ್ವದ ಪಾತ್ರ ವಹಿಸುತ್ತಿದ್ದವು. ಕೋಟೆಯ ಬಗ್ಗೆ ಕೌಟಿಲ್ಯನ ಅರ್ಥಶಾಸ್ತ್ರ, ಕಮಂಡಕನ ನೀತಿಶಾಸ್ತ್ರ,ಕನಕದಾಸನ ಮೋಹನ ತರಂಗಿಣಿ, ಶುಕ್ರನ

ನೀತಿಸಾರ, ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ ಮುಂತಾದ ಕೃತಿಗಳಲ್ಲಿ ಕೋಟೆಗಳ ನಿರ್ಮಾಣ ಅವುಗಳ ಮಹತ್ವ ಕುರಿತು ವಿವರ ನೀಡುತ್ತವೆ. ರಾಜ ತನ್ನ ಪ್ರಜೆಗಳ ಮತ್ತು ಸಂಪತ್ತಿನ ರಕ್ಷಣೆಗಾಗಿ ಭದ್ರವಾದ ಬಾಗಿಲುಗಳುಳ್ಳ ಗೋಡೆಗಳು ಅವಶ್ಯವಾಗಿ ಕಟ್ಟಬೇಕೆಂದು ರಾಜನೀತಿ ಸಂಹಿತೆ ಹಾಗು ಬೃಹಸ್ಪತಿಯ ವಚನದಲ್ಲಿ ತಿಳಿಸುತ್ತದೆ.[೩] ಕೌಟಿಲ್ಯನ ಅರ್ಥಶಾಸ್ತ್ರವು ರಾಜ ತನ್ನ ರಾಜ್ಯದ ಎಲ್ಲೆಯ ೪ ದಿಕ್ಕುಗಳಲ್ಲಿ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ ಕೋಟೆಗಳನ್ನು ಕಟ್ಟಬೇಕೆಂದು ತಿಳಿಸಿದ್ದಾನೆ.[೪] ಅಲ್ಲದೆ ಕೋಟೆಯು ಕೋಶಗಳಿಗಿಂತ ಮಿಗಿಲಾದದ್ದು ಎಂದು ತಿಳಿಸಿದ್ದಾನೆ. ಯುದ್ಧದಲ್ಲಿ ಸಾವಿರಾರು ಆನೆಗಳಿಂದ ಲಕ್ಷಾಂತರ ಕುದುರೆಗಳಿಂದ ನಿರ್ವಹಿಸಲಾಗದ ಕಾರ್ಯವನ್ನು ಒಬ್ಬ ರಾಜ ಕೋಟೆಯ ಸಹಾಯದಿಂದ ನಿರ್ವಹಿಸಬಲ್ಲನ್ನು ಎಂದು ಪಂಚತಂತ್ರ ತಿಳಿಸುತ್ತದೆ.[೫] ಅದೇ ರೀತಿ ಮನು ತಿಳಿಸುವಂತೆ ಕೋಟೆಯೊಳಗಿರುವ ಯೋಧನು ಹೊರಗಿನ ನೂರು ಜನಯೋಧರೊಂದಿಗೂ , ನೂರು ಜನ ಯೋಧರು ಹತ್ತು ಸಾವಿರ ಯೋಧರೊಂದಿಗೆ ಸರಿಸಮನಾಗಿ ಕಾದಾಡಬಲ್ಲರು ಎಂದಿದ್ದಾನೆ.[೬] ಕೋಟೆಗಳು ಅಂದಿನ ರಾಜಕೀಯ ಹಾಗು ಸಾಮಾಜಿಕ ಜೀವನದಲ್ಲಿ ಅವಿಭಾಜ್ಯ ಅಂಗವಾಗಿ ತಮ್ಮದೇ ಆದಂತಹ ಪ್ರಮುಖ ಪಾತ್ರ ವಹಿಸಬಹುದು.

ಕರ್ನಾಟಕದಲ್ಲಿ ವಿವಿಧ ರಾಜ ವಂಶಗಳ ಸಂಘಟನೆಯಲ್ಲಿ ಕೋಟೆಗಳು ಮುಖ್ಯ ಪಾತ್ರ ವಹಿಸುತ್ತವೆ. ರಾಜರುಗಳ ಏಳಿಗೆ ಮತ್ತು ವಿನಾಶಕ್ಕೆ ಮುಖ್ಯ ಕಾರಣ ಕೋಟೆಗಳನ್ನು ವಶಪಡಿಸಿಕೊಳ್ಳುವುದಾಗಿದೆ. ಅನೇಕ ರಾಜರು ಆಯಾ ಕಾಲಕ್ಕೆ ಭೌಗೋಳಿಕ ಪರಿಸರಕ್ಕೆ ತಕ್ಕಂತೆ ಭೂಮಿಯ ಮೇಲೆ ವನದ ಮಧ್ಯೆ ಜಲದ ಮಧ್ಯೆ ಕೋಟೆಗಳನ್ನು ಕಟ್ಟುತ್ತಿದ್ದರು. ಪ್ರಾಚೀನ ಹಾಗು ಮಧ್ಯಕಾಲೀನ ಕೃತಿಗಳು ಕೋಟೆಗಳ ವಿವಿಧ ಪ್ರಕಾರಗಳನ್ನು ತಿಳಿಸಿವೆ. ಕೌಟಿಲ್ಯನು ೪ ಪ್ರಕಾರದ ಕೋಟೆಗಳ ಬಗ್ಗೆ ಹೇಳಿದ್ದಾನೆ. ಮನುಸ್ಮೃತಿಯು ಆರು, ಶುಕ್ರ ನೀತಿಸಾರವು ಒಂಭತ್ತು ಬಗೆಯನ್ನು , ಮಾನಸಾರ ಎಂಟು ವಿಧದ ಮತ್ತು ಪಂಚತಂತ್ರವು ಎಂಟು ಬಗೆಯ ಕೋಟೆಯನ್ನು ಮನಸೋಲ್ಲಾಸವು ಒಂಭತ್ತು ಬಗೆಯ ಕೋಟೆಗಳನ್ನು ತಿಳಿಸುತ್ತವೆ. ಹೆಚ್ಚಾಗಿ ಕಂಡು ಬರುವ ಕೋಟೆಗಳೆಂದರೆ ರಾಜಧಾನಿ ದುರ್ಗ , ಗಿರಿದುರ್ಗ, ವನದುರ್ಗ, ಜಲದುರ್ಗಗಳಾಗಿವೆ. ಈ ಹಿನ್ನೆಲೆಯಲ್ಲಿ ನಾವು ಕೋಟೆಗಳನ್ನು ಸಮೀಕ್ಷಿಸಬೇಕಾಗಿದೆ.

ಕೋಟೆಗಳಿಗೆ ಸಮಕಾಲೀನ ಭೌಗೋಳಿಕ ನೆಲೆಯ ಹಿನ್ನೆಲೆ ಒಂದೆಡೆಯಾದರೆ ಆ ಕಾಲದ ರಾಜ್ಯದ ತಂತ್ರಗಾರಿಕೆ, ರಾಜಕೀಯ ಪ್ರತಿಷ್ಠೆ, ಇನ್ನೊಂದೆಡೆಯಾಗಿದೆ. ಪ್ರಕೃತಿಯ ಸಮೃದ್ಧಿ, ಆರ್ಥಿಕ ಸ್ಥಿತಿಗತಿ, ಸಮಕಾಲೀನ ವಾಸ್ತುಶೈಲಿಗಳ ಪರಿಚಯ, ಕಲಾಭಿರುಚಿ ಸ್ಥಳೀಯವಾಗಿ ಲಭ್ಯವಿರಲಿಲ್ಲ. ಶಿಲೆಗಳು ಕೋಟೆಯ ವಾಸ್ತು ಕಲೆಯಲ್ಲಿ ನಿರ್ಣಾಯಕವಾಗಿದ್ದವು. ದೇಗುಲ ವಾಸ್ತು ಕಲೆಯಂತೆ ಇಂದೂ ಸಂಕೀರ್ಣವಾದುದು. ನಿವೇಶನ ಆಯ್ಕೆ ರಕ್ಷಕಬಿತ್ತಿ, ಬುರುಜು, ಕೊಡೆತೆನೆ, ಕಂದಕ, ನೀರಿನ ಸರಬರಾಜು, ಗೋಡೆಯ ಎತ್ತರ, ಬಳಸಿದ ಕಲ್ಲು, ಬತೇರಿ, ಮದ್ದಿನ ಮನೆ , ಕೋತವಾಲರ ಗೂಡು , ಕಣಜಗಳು, ತುಪ್ಪದ ಕೊಳ, ಅರಮನೆ , ತೋಪುಖಾನೆ, ನೀರಿನ ವ್ಯವಸ್ಥೆ ಈ ಎಲ್ಲಾ ಸೌಲಭ್ಯಗಳು ಬೇಕಾಗಿದ್ದವು. ಕೋಟೆಗಳು ಒಂದು ಸುತ್ತಿನಿಂದ ಹಿಡಿದು ಹಲವು ಸುತ್ತುಗಳ ವರೆಗೆ ನಿರ್ಮಿಸಿರುವುದು ಕಾಣಬಹುದು. ಕೋಟೆಗಳನ್ನು ಸ್ಥಳಕ್ಕನುಗುಣವಾಗಿ ವೃತ್ತಾಕಾರವಾಗಿ, ಚೌಕಾಕಾರವಾಗಿ ಕಟ್ಟಿರುವುದನ್ನು ಕಾಣಬಹುದಾಗಿದೆ

**ಚನ್ನರಾಯನ ದುರ್ಗ ಕೋಟೆ**

ಚನ್ನರಾಯನದುರ್ಗವು ತಾಲ್ಲೂಕು ಕೇಂದ್ರದಿಂದ ೮ ಕಿ.ಮೀ. ದೂರದಲ್ಲಿದ್ದು ಪಾಳೆಗಾರರ ಕಾಲದಲ್ಲಿ ನಿರ್ಮಾಣವಾದ ಜೀವಂತ ಕೋಟೆಯನ್ನು ಕಾಣಬಹುದಾಗಿದೆ.ಇದು ಜಿಲ್ಲಾಕೇಂದ್ರದಿಂದ ಸುಮಾರು ೩೨ ಕಿ.ಮೀ ದೂರದಲ್ಲಿದೆ.ಕೊರಟಗೆರೆಯ ಮೂಲಕ ರಾಷ್ಟ್ರೀಯ ಹೆದ್ದಾರಿ ೩ ಈ ಪರಿಸರದಲ್ಲಿ ಹಾದುಹೋಗುತ್ತದೆ. ರೈಲ್ವೆ ರಸ್ತೆಗೆ ಸುಮಾರು ೨೮ ಕಿ.ಮೀ. ದೂರದಲ್ಲಿದೆ. ಚನ್ನರಾಯನದುರ್ಗ ಕೋಟೆಯು ಗಿರಿದುರ್ಗವಾಗಿದ್ದು, ಉತ್ತರ ದಕ್ಷಿಣವಾಗಿ ಸುಮಾರು ೩ ಕಿ.ಮೀ ಹಾಗು ಪೂರ್ವ ಪಶ್ಚಿಮವಾಗಿ ೨ ಕಿ.ಮೀ ಒಟ್ಟಾರೆ ೫ ಕಿ.ಮೀ. ವ್ಯಾಪ್ತಿಯನ್ನು ಒಳಗೊಂಡಿದೆ. ಈ ಬೆಟ್ಟವು ಸಮುದ್ರಮಟ್ಟದಿಂದ ಸುಮಾರು ೩೭೩೪ ಅಡಿ ಎತ್ತರದಲ್ಲಿದೆ. ಪ್ರಸ್ತುತ ಊರಿಗೂ ಕೋಟೆ ಗೋಡೆ ಆವರಿಸಿರುವುದು ಕಂಡು ಬರುತ್ತದೆ. ಚನ್ನರಾಯನ ದುರ್ಗವನ್ನು ಶಾಸನಗಳಲ್ಲಿ ಪ್ರಸನ್ನಗಿರಿ, ಚಂದ್ರಾಯನ ದುರ್ಗ, ಚನ್ನರಾಯನದುರ್ಗ ಎಂಬ ಹೆಸರುಗಳಿಂದ ಕರೆಯಲಾಗುತ್ತಿದೆ. ೧೭೬೬ ರಲ್ಲಿ ಮರಾಠರು ಈ ಕೋಟೆಯನ್ನು ಆಕ್ರಮಿಸಿಕೊಂಡಿದ್ದರು.

ಚನ್ನರಾಯನದುರ್ಗ ಕೋಟೆಯನ್ನು ಬೃಹತ್ತಾದ ಬಂಡೆ ಕಲ್ಲುಗಳಿಂದ ಕೂಡಿದ ಬೆಟ್ಟದ ಮೇಲೆ ನಿರ್ಮಿಸಲಾಗಿದೆ. ಈ ಬೆಟ್ಟವು ಹಲವು ಹಂತಗಳಲ್ಲಿ ಮೇಲೇರಿದ್ದು ಸಮೀಪದ ಮಧುಗಿರಿ ಮತ್ತು ಮಿಡಿಗೇಶಿ ಮಾದರಿಯಂತೆ ಕಲ್ಲಿನಲ್ಲಿ ಹಲವು ಹಂತಗಳ ಅಸಂಖ್ಯಾತವಾದ ರಾಕ್ಷಸಾಕಾರದ ಕೋಡುಗಲ್ಲುಗಳಿಂದ ಬೆಟ್ಟವು ರಚನೆಯಾಗಿದೆ. ಇಂತಹ ಕೋಡುಗಲ್ಲುಗಳ ಎತ್ತರ ಸುಮಾರು ೮೦ ರಿಂದ ೧೦೦ ಅಡಿಗಳ ಎತ್ತರವಾಗಿರುವುದನ್ನು ಕಾಣಬಹುದು. ಚನ್ನರಾಯನ ಕೋಟೆಗೆ ಮೊಟ್ಟಮೊದಲಿಗೆ ತಳಪಾಯವನ್ನು ಹಾಕಿದ ಕೀರ್ತಿ ಮಧುಗಿರಿ ಪಾಳೆಗಾರನಾದ ಚಿಕ್ಕಪ್ಪಗೌಡನಿಗೆ ಸಲ್ಲುತ್ತದೆ. ಈತನು ೧೩ ನೇ ಶತಮಾನದಲ್ಲಿ ೧೬೧೩ ರಲ್ಲಿ ಆನಂದನಾಮ ಸಂವತ್ಸರದ ಮಾಘಬಹುಳ ಪಂಚಮಿ ಗುರುವಾರದಂದು ಕಟ್ಟಿಸಲ್ಪಟ್ಟನು ಎಂದು ಇಲ್ಲಿ ದೊರೆತ ಶಾಸನದಿಂದ ತಿಳಿದು ಬಂದಿದೆ.[೭] ಚಿಕ್ಕಪ್ಪಗೌಡನು ಅನೇಕ ವರ್ಷಗಳ ಕಾಲ ಕುಟುಂಬ ಸಮೇತ ಈ ಗಿರಿದುರ್ಗದಲ್ಲಿ ವಾಸವಾಗಿದ್ದನು. ಇದು ನಂತರದಲ್ಲಿ ಮರಾಠರ ಅದೀನವಾಯಿತು. ಆ ಸಂದರ್ಭದಲ್ಲಿ ಅಲ್ಲಿನ ನಾಯಕನಾಗಿದ್ದ ರಾಮೇಗೌಡನು ಮಧುಗಿರಿಗೆ ಹೋಗಿ ಆಶ್ರಯ ಪಡೆದನು. ೨ ವರ್ಷಗಳ ನಂತರ ಮತ್ತೆ ಚನ್ನರಾಯನದುರ್ಗ ವಶಪಡಿಸಿಕೊಂಡು ಕೇವಲ ೨ ವರ್ಷಗಳ ಕಾಲ ಆಳ್ವಿಕೆ ಮಾಡಿದನು.ನಂತರ ಮೈಸೂರು ರಾಜರ ದಂಡನಾಯಕ ಕೋಮಾರಯ್ಯನು ಇದನ್ನು ವಶಪಡಿಸಿಕೊಂಡನು. ನಂತರದಲ್ಲಿ ಹೈದರಾಲಿಯು ವಶಪಡಿಸಿಕೊಂಡು ನಶಿಸಿದ ಕೋಟೆಯನ್ನು ಮತ್ತೆ ಜೀರ್ಣೋದ್ಧಾರ ಗೊಳಿಸಿ ಕೋಟೆ ನಿರ್ಮಿಸಿ ಆಳ್ವಿಕೆ ಮಾಡಿದನು.

## ೫.೧ ಕೋಟೆಯ ರಚನೆ

ವ್ಯವಸ್ಥಿತವಾಗಿ ನಿರ್ಮಾಣಗೊಂಡ ಕೋಟೆಗಳಲ್ಲಿ ಚನ್ನರಾಯನದುರ್ಗ ಕೋಟೆಯು ಒಂದಾಗಿದೆ. ಶಾಸನೋಕ್ತ ಉಲ್ಲೇಖದಂತೆ ಈ ಕೋಟೆಯು ೧೬ ನೇ ಶತಮಾನದ ೧೬೧೩ ದಲ್ಲಿ ನಿರ್ಮಿಸಿದಂತಹ ಕೋಟೆಯಾಗಿದೆ. ಈ ಕೋಟೆಯ ನಿರ್ಮಾಣಕ್ಕೆ ಸ್ಥಳೀಯವಾಗಿ ದೊರೆಯುವಂತಹ ಗ್ರಾನೈಟ್ ಕಲ್ಲು ಹಾಗು ಮಣ್ಣನ್ನು ಬಳಸಿ ಕೋಟೆ ಕಟ್ಟಲಾಗಿದೆ. ಮಧ್ಯದಲ್ಲಿ ಚಿಕ್ಕ ಜಲ್ಲಿಯನ್ನು ಬಳಸಿದ್ದಾರೆ. ಕೋಟೆಯ ಗೋಡೆಯ ೫ ಅಡಿ ಅಗಲವನ್ನು ಹೊಂದಿದ್ದು ಕೆಳಭಾಗದಲ್ಲಿ ಬೃಹತ್ ಕಲ್ಲುಗಳನ್ನು ಬಳಸಿ ಮೇಲಕ್ಕೆ ಹೋದಂತೆ ಮಧ್ಯಮ ಗಾತ್ರದ ಕಲ್ಲುಗಳನ್ನು ಬಳಸಿದ್ದಾರೆ. ಈ ಕೋಟೆ ಸುಮಾರು ೧೫ ಅಡಿ ಎತ್ತರ ಹೊಂದಿದ್ದು ಕೋಟೆಯ ಒಳಭಾಗದಲ್ಲಿ ಪಹರೆ ಕಾಯಲು ಇಟ್ಟಿಗೆ ಮತ್ತು ಗಾರೆಯಿಂದ ಕೈಪಿಡಿ ಗೋಡೆಯನ್ನು ರಚಿಸಲಾಗಿದೆ. ಇದರಲ್ಲಿ ಅಂಬುಕಿಂಡಿ, ಬಂದೂಕು ಕಿಂಡಿಗಳನ್ನು ರಚಿಸಿದ್ದಾರೆ. ಆಯಾ ಕಟ್ಟಿನ ಪ್ರದೇಶಗಳಲ್ಲಿ ಬುರುಜುಗಳ ರಚನೆ ಕಂಡು ಬರುತ್ತದೆ. ಇಲ್ಲಿ ಸುಮಾರು ೪೦ ಬುರುಜುಗಳನ್ನು ಕಾಣಬಹುದು. ಇವುಗಳಲ್ಲಿ ಫಿರಂಗಿಗಳನ್ನು ಇಟ್ಟುಕೊಳ್ಳಲು ಫಿರಂಗಿ ಕಿಂಡಿಗಳು, ಕೋಟೆಯ ಗೋಡೆಯಲ್ಲಿ ನೀರುಕಿಂಡಿಗಳು,ಜೋರು ಕಿಂಡಿಗಳು ಇವೆ. ಆದರೆ ಇಂದು ನಗರ ಬೆಳವಣಿಗೆಯಿಂದ ಈ ಕಂದಕವು ಸಂಪೂರ್ಣವಾಗಿ ಮುಚ್ಚಿ ಹೋಗಿದೆ.

ಚನ್ನರಾಯನ ದುರ್ಗ ಕೋಟೆಯು ೭ ಸುತ್ತಿನ ಕೋಟೆಯನ್ನು ಒಳಗೊಂಡಿದ್ದು ಚನ್ನರಾಯನದುರ್ಗ ಗ್ರಾಮವು ಒಂದು ಸುತ್ತಿನ ಕೋಟೆಯನ್ನು ಬಳಸಿದೆ ಉಳಿದ ೬ ಸುತ್ತುಗಳು ಕೋಟೆಯನ್ನು ಆವರಿಸಿವೆ. ಈ ಕೋಟೆಯು ಸುಮಾರು ೧೦ ಬಾಗಿಲುಗಳನ್ನು ಒಳಗೊಂಡಿದೆ. ಅವುಗಳೆಂದರೆ ದಕ್ಷಿಣಕ್ಕಿರುವ ಬಾಗಿಲನ್ನು ಇದನ್ನು ಕೊರಟಗೆರೆ ಬಾಗಿಲು ಎಂದು ಕರೆಯುತ್ತಾರೆ. ಕೆಳಗಿನಿಂದ ನೋಡಿದಾಗ ಈ ಬಾಗಿಲು ನೇರವಾಗಿ ಕಂಡು ಬರುವುದಿಲ್ಲ. ಬಾಗಿಲು ಪಶ್ಚಿಮ ದಿಕ್ಕಿಗಿದೆ. ನರತರದಲ್ಲಿ ಉತ್ತರದಲ್ಲಿ ಬಾಗಿಲು ಹೊಂದಿದ್ದು ಇದನ್ನು ಮಧುಗಿರಿ ಹೆಬ್ಬಾಗಿಲು ಎಂದು ಕರೆಯುತ್ತಾರೆ. ಈ ಬಾಗಿಲುಗಳು ವಿಜಯನಗರದ ಶೈಲಿಯಲ್ಲಿ ರಚಿಸಲಾಗಿದ್ದು, ಲಲಾಟದಲ್ಲಿ ಗಣೇಶನ ಶಿಲ್ಪ ಕೆತ್ತಲಾಗಿದೆ. ಬಾಗಿಲು ಕಂಬಗಳಲ್ಲಿ ಪಟ್ಟಿಯನ್ನು ಕೆತ್ತಲಾಗಿದೆ. ಬಾಗಿಲ ಮೇಲ್ಬಾಗದಲ್ಲಿ ಗಾರೆಯಿಂದ ಮಾಡಿದ ೪ ಪಟ್ಟಿಗಳನ್ನು ಒಳಗೊಂಡಿದ್ದು, ಮೊದಲ ಪಟ್ಟಿಯಲ್ಲಿ ಅರಳಿದ ಹೂ ಎರಡನೇ ಪಟ್ಟಿಯಲ್ಲಿ ತೋರಣಗಳನ್ನು ಮೂರನೇ ಪಟ್ಟಿಯಲ್ಲಿ ಚಕ್ರವನ್ನು ಕೆತ್ತಲಾಗಿದೆ. ಅದರ ಮೇಲ್ಬಾಗದಲ್ಲಿ ಎಲೆಯಾಕಾರದ ಅರ್ಧಭಾಗದ ರೀತಿಯಲ್ಲಿ ಕೆತ್ತಲಾಗಿದೆ. ಈ ಬಾಗಿಲುಗಳಿಗೆ ಹೆಸರುಗಳನ್ನಿಡಲು ಆ ದಿಕ್ಕುಗಳಲ್ಲಿರುವ ಪ್ರಮುಖ ಪಟ್ಟಣಗಳ ಹೆಸರನ್ನಿಟ್ಟಿದ್ದಾರೆ.ಅಂದರೆ ಇವುಗಳ ನಡುವಿನ ಸಂಬಂಧವನ್ನು ಹಾಗು ಪ್ರಮುಖ ಗಡಿ ರಾಜ್ಯಗಳಾಗಿದ್ದರಿಂದ ಆ ಪಟ್ಟಣಗಳ ಹೆಸರುಗಳಿಂದ ಕರೆದಿದ್ದಾರೆ. ಮಧುಗಿರಿ ದ್ವಾರ ಬಾಗಿಲ ಎಡಭಾಗದ ಸ್ವಾಭಾವಿಕ ಬಂಡೆಯಲ್ಲಿ ಸುಮಾರು ೪ ಅಡಿ ಎತ್ತರದ ಆಂಜನೇಯ ಮೂರ್ತಿಯನ್ನು ಕೆತ್ತಲಾಗಿದ್ದು ಇದಕ್ಕೆ ಚಿಕ್ಕದಾದ ಮಂಟಪವನ್ನು ರಚಿಸಿದ್ದು ಇಂದು

ನಶಿಸಿಹೋಗಿದೆ.

ಕೋಟೆಯ ಮತ್ತೊಂದು ಪ್ರಮುಖ ಬಾಗಿಲೆಂದರೆ ದಕ್ಷಿಣ ದಿಕ್ಕಿಗೆ ಇರುವಂತಹ ಕೊರಟಗೆರೆ ಊರು ಬಾಗಿಲು ಈ ಬಾಗಿಲು ಹೊರಗೋಡೆಗೆ ನೇರವಾಗಿ ಕಾಣುವುದಿಲ್ಲ. ಈ ಬಾಗಿಲ ಲಲಾಟದಲ್ಲಿ ಚಕ್ರದ ಕೆತ್ತನೆ ಇದ್ದು ವಿಜಯನಗರದ ಶೈಲಿಯನ್ನು ಕೆತ್ತನೆ ಕಂಬದ ಪಟ್ಟಿಯಲ್ಲಿ ಕೆತ್ತಲಾಗಿದೆ. ಈ ಬಾಗಿಲು ೮ ಅಡಿ ಎತ್ತರ೯ ಅಡಿ ಅಗಲವಿದ್ದು ಬಾಗಿಲ ಮೇಲ್ಭಾಗದಲ್ಲಿ ೫ ಅಡಿ ಎತ್ತರದ ಕಲ್ಲು ಮತ್ತು ಗಾರೆಯಿಂದ ಕಟ್ಟಿದ ಕಟ್ಟಡವಿದೆ. ಇದರ ಮೇಲ್ಭಾಗದಲ್ಲಿ ಅರ್ಧಕಮಾನಿನ ಆಕಾರದ ಅಥವಾ ಎಲೆಯ ಆಕಾರದ ರೀತಿ ಕೆತ್ತನೆ ಇದೆ. ಮಧ್ಯದಲ್ಲಿ ಕಮಲ ದಳದ ವಜ್ರ ಆಕೃತಿಯ ರೀತಿಯಲ್ಲಿ ರಚಿಸಲಾಗಿದೆ. ಈ ಬಾಗಿಲ ಮೂಲಕ ಒಳಪ್ರವೇಶಕ್ಕೆ ಮುನ್ನ ಬಲಭಾಗದಲ್ಲಿ ಮರಾಠರಿಗೆ ಸಂಬಂಧಿಸಿದ ಶಾಸನವು ಕಂಡು ಬರುತ್ತದೆ. ಇದರಿಂದ ತಿಳಿಯುವ ಅಂಶವೆಂದರೆ ಈ ಕೋಟೆ ಮರಾಠರ ಅದೀನದಲ್ಲಿತ್ತು ಎಂಬುದು ತಿಳಿದು ಬರುತ್ತದೆ. ಈ ಬಾಗಿಲನ್ನು ಪ್ರವೇಶಿಸಿದಾಗ ಎಡ ಮತ್ತು ಬಲ ಬಾಗದಲ್ಲಿ ಜಗತಿಯನ್ನು ನಿರ್ಮಿಸಲಾಗಿದ್ದು, ತಲಾ ಎರಡು ಕಂಬಗಳಿಂದ ಕೂಡಿವೆ. ಬಾಗಿಲುಗಳು ನೇರವಾಗಿರದೆ ವಕ್ರ ರೀತಿಯಲ್ಲಿವೆ. ಇದರಿಂದ ಶತೃಗಳು ಒಳನುಗ್ಗುವಾಗ ಸುಲಭವಾಗಿ ಅವರನ್ನು ಹಿಡಿಯಲು ನಿರ್ಮಿಸಿದ್ದಾರೆ.

ಎರಡನೇ ಬಾಗಿಲ ಎದುರಿನ ಗೋಡೆಯಲ್ಲಿ ನಂದಿಶಿಲ್ಪವನ್ನು ಕೆತ್ತಲಾಗಿದೆ. ಪಕ್ಕದಲ್ಲಿ ವಿಷ್ಣುವಿನ ಶಿಲ್ಪವನ್ನು ಶಿಥಿಲಗೊಳಿಸಲಾಗಿದ್ದು ದ್ವಾರಪಾಲಕರ ವಿಗ್ರವನ್ನು ಕಾಣಬಹುದಾಗಿದೆ. ದ್ವಾರ ಬಾಗಿಲ ಎಡಭಾಗದಿಂದ ಕಂಬದ ಮೇಲೆ ಕಹಳೆ ಊದುತ್ತಿರುವ ಶಿಲ್ಪಗಳನ್ನ ಖಂಡರಿಸಲಾಗಿದೆ. ಈ ಶಿಲ್ಪದ ಪಕ್ಕದಲ್ಲಿ ದಿಡ್ಡಿ ಬಾಗಿಲನ್ನು ಇಡಲಾಗಿದೆ. ಇದು ೩ ಅಡಿ ಉದ್ದ ೩ ಅಡಿ ಅಗಲ ಹೊಂದಿದ್ದು, ವಿಜಯನಗರದ ಶೈಲಿಯಾಗಿದೆ. ಒಳ ಪ್ರವೇಶಿಸಿದ ಕೂಡಲೇ ಭತ್ತ ರಾಗಿಯ ಕಣಜಗಳು ಕಂಡು ಬರುತ್ತವೆ. ಇದು ಜಗತಿಯ ಮೇಲೆ ನಿರ್ಮಾಣವಾಗಿದ್ದು, ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ್ದು ೪ ಕಂಬಗಳಿಂದ ಕೂಡಿದೆ. ಇದರಿಂದ ಮುಂದೆ ಸರಿದರೆ ಮೂರನೇ ಕೋಟೆಯ ಪ್ರವೇಶವಾದಂತೆ. ಈ ಕೋಟೆ ಪ್ರವೇಶಿಸಿದಾಗ ವಿಶಾಲವಾದ ಪ್ರಾಂಗಣದಂತೆ ಕಂಡು ಬರುವ ಬಂಡೆಯ ಮೇಲೆ ನಿರ್ಮಾಣವಾದ ಈಶ್ವರ ದೇವಾಲಯ ಈ ದೇವಾಲಯವು ಪೂರ್ವಕ್ಕೆ ಮುಖ ಮಾಡಿದ್ದು, ೪ ಅಡಿ ಎತ್ತರದ ಜಗತಿಯ ಮೇಲೆ ನಿರ್ಮಿಸಲಾಗಿದ್ದು ತೆರೆದ ಮಂಟಪ ಸುಖನಾಸಿ ಗರ್ಭಗೃಹ ಒಳಗೊಂದು ಗಾರೆ ಇಟ್ಟಿಗೆಯಿಂದ ನಿರ್ಮಿಸಲಾಗಿದೆ. ಗರ್ಭಗುಡಿಯಲ್ಲಿ ಈಶ್ವರನ ವಿಗ್ರಹವು ಇಲ್ಲವಾಗಿದ್ದು ಅದರ ಜಾಗದಲ್ಲಿ ಇತ್ತೀಚಿಗೆ ಸ್ಥಳೀಯರು ಗಣೇಶನ ವಿಗ್ರವನ್ನು ಇಟ್ಟಿರುವುದು ಕಂಡು ಬರುತ್ತದೆ. ಈ ದೇವಾಲಯದ ಕಂಬಗಳ ಕೆತ್ತನೆ ಸಾಧಾರಣವಾಗಿದೆ. ಛಾವಣಿಯ ಮೇಲ್ಭಾಗದಲ್ಲಿ ೨ ಕೋಷ್ಟಕವನ್ನು ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಿದ್ದು ಯಾವ ಶಿಲ್ಪವು ಕೋಷ್ಟಕದಲ್ಲಿಲ್ಲ. ದೇವಾಲಯದ ಛಾವಣಿಯ ಮೂಲೆಯಲ್ಲಿ ನಂದಿಯ ವಿಗ್ರಹವನ್ನು ಕೆತ್ತಲಾಗಿದೆ. ಈ ದೇವಾಲಯದ ಎಡಭಾಗದಲ್ಲಿ ತುಳಸಿ ಕಟ್ಟೆಯನ್ನು ನಿರ್ಮಿಸಿರುವುದು ಕಂಡು ಬಂದಿದ್ದು ಮುಂಭಾಗದಲ್ಲಿ

ವಿಶಾಲವಾದ ಸ್ವಾಭಾವಿಕ ದೊಣೆ ಕಂಡು ಬರುತ್ತದೆ. ಪೂರ್ವ ಪಶ್ಚಿಮವಾಗಿ ಕಡಿಮೆ ವಿಸ್ತೀರ್ಣ ಒಳಗೊಂಡಿದ್ದು ಉತ್ತರ ದಕ್ಷಿಣವಾಗಿ ಉದ್ದವಾಗಿದೆ. ದಕ್ಷಿಣದಲ್ಲಿ ಅಗಲವಾಗಿದ್ದು ನೀರು ತಡೆದು ನಿಲ್ಲಿಸಲು ಗಾರೆ ಮತ್ತು ಇಟ್ಟಿಗೆಯಿಂದ ಗೋಡೆಯನ್ನು ನಿರ್ಮಿಸಲಾಗಿದೆ. ಇಂದಿಗೂ ನೀರು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ.

ಈ ದೇವಾಲಯದ ಹಿಂಬದಿಯಲ್ಲಿ ಉಪ್ಪಿನ ಕಣಜವಿದೆ. ಇದು ವೃತ್ತಾಕಾರದಲ್ಲಿ ನಿರ್ಮಿಸಲಾಗಿದ್ದು ಇದರ ನಿರ್ಮಾಣದಲ್ಲಿ ಮಧ್ಯಮ ಗಾತ್ರದ ಕಲ್ಲುಗಳನ್ನು ಬಳಸಿ ಸುಮಾರು ೮ ಅಡಿ ಎತ್ತರವಿದ್ದು ೪ ಅಡಿ ಉದ್ದ ೩ ಅಡಿ ಅಗಲದ ಬಾಗಿಲನ್ನು ನಿರ್ಮಿಸಲಾಗಿದೆ. ಇದರ ಮೇಲ್ಭಾಗವನ್ನು ಬಂಡೆ ಮತ್ತು ಗಾರೆಯಿಂದ ಮುಚ್ಚಲಾಗಿದೆ. ಛಾವಣಿ ಹೊತ್ತ ೨ ಕಂಬಗಳು ಯಾವುದೇ ಕೆತ್ತನೆಗೆ ಒಳಗಾಗಿಲ್ಲ. ಇದರ ಮೇಲ್ಭಾಗಕ್ಕೆ ನಡೆದರೆ ಎಮ್ಮೆ ಮುಸುರೆ ದೊಣೆ ಕಂಡು ಬರುತ್ತದೆ. ಇದು ೫ ಅಡಿ ಆಳ ೩ ಅಡಿ ಸುತ್ತಳತೆ ಒಳಗೊಂಡಿದೆ. ಇದನ್ನು ಗಾರೆಯಿಂದ ನಿರ್ಮಿಸಲಾಗಿದ್ದು, ಎಮ್ಮೆಗಳಿಗೆ ಮುಸುರೆ ಇಡಲು ಬಳಸುತ್ತಿದ್ದರು. ಇದರ ದಕ್ಷಿಣಕ್ಕೆ ಕೇಶವ ದೇವಾಲಯವನ್ನು ನಿರ್ಮಿಸಲಾಗಿದೆ. ಈ ದೇವಾಲಯಕ್ಕೆ ಮುಖ್ಯ ದ್ವಾರವಿದ್ದು ದ್ವಾರದ ಮೂಲಕ ದೇವಾಲಯ ಪ್ರವೇಶಿಸಿದರೆ ತೆರೆದ ಮಂಟಪವು ಕಂಡು ಬರುತ್ತದೆ. ಈ ಮಂಟಪವು ೧೨ ಕಂಬಗಳಿಂದ ಕೂಡಿದ್ದು ಸರಳ ಕೆತ್ತನೆಯಿದೆ ಸುಖನಾಸಿ ಗರ್ಭಗೃಹ ಒಳಗೊಂಡಿದ್ದು ಸುಖನಾಸಿಯ ಲಲಾಟದಲ್ಲಿ ಗಜಲಕ್ಷ್ಮಿಯ ಶಿಲ್ಪ ಕೆತ್ತಲಾಗಿದೆ. ಅಲ್ಲದೆ ದ್ವಾರಪಾಲಕರ ಶಿಲ್ಪಗಳು ಕಂಡು ಬಂದಿವೆ. ಈ ದೇವಾಲಯದ ಗರ್ಭಗುಡಿಯಲ್ಲಿ ಕೇಶವನ ಮೂರ್ತಿಯನ್ನು ನಿಧಿಗಳ್ಳರು ಶಿಥಿಲಗೊಳಿಸಿದ್ದು, ಆ ಶಿಲ್ಪದ ಅವಶೇಷಗಳು ಇಂದಿಗೂ ಕಂಡು ಬರುತ್ತವೆ.

ಮೂರನೇ ಕೋಟೆಯ ಬಾಗಿಲು ಕೇಶವ ದೇವಾಲಯದ ಮೇಲ್ಭಾಗದಲ್ಲಿ ಕಂಡು ಬರುತ್ತದೆ. ಇದಕ್ಕೆ ಮರದ ಬಾಗಿಲು ಬಳಸುತ್ತಿದ್ದರೆಂದು ಅಲ್ಲಿರುವ ಕೂರುಗದಿಂದ ತಿಳಿಯಬಹುದಾಗಿದೆ. ಈ ಕೋಟೆಯ ಬಾಗಿಲ ಮೂಲಕ ಒಳಸರಿದರೆ ಕಂಡು ಬರುವುದೇ ತುಪ್ಪದ ಕಣಜ. ಇದು ಬಾಗಿಲ ಬಲಭಾಗದಲ್ಲಿಯೇ ಕಂಡು ಬಂದಿದ್ದು ೧೫ ಅಡಿ ಎತ್ತರವಿದ್ದು ಮಧ್ಯಮ ಗಾತ್ರದ ಕಲ್ಲುಗಳಿಂದ ನಿರ್ಮಿಸಿ, ಮೇಲ್ಭಾಗದಲ್ಲಿ ಗಾರೆ ಮತ್ತು ಚಪ್ಪಡಿಗಳಿಂದ ಮುಚ್ಚಲಾಗಿದೆ. ಇದರ ಬಾಗಿಲು ೩ ಅಡಿ ಉದ್ದ ೩ ಅಡಿ ಅಗಲವಿದ್ದು ಜನಸಾಮಾನ್ಯರಿಂದ ಹತ್ತಲು ಸಾಧ್ಯವಿಲ್ಲ. ಹತ್ತಲು ಅಲ್ಲಲ್ಲಿ ಮೆಟ್ಟಿಲುಗಳಂತೆ ಹೊರಬಂದ ಗೋಡೆ ಕಲ್ಲುಗಳನ್ನು ರಚಿಸಲಾಗಿದೆ. ಇದರ ಒಳಭಾಗವನ್ನು ಗಾರೆಯಿಂದ ಮೆತ್ತಲಾಗಿದ್ದು ೧೫ ಅಡಿ ಎತ್ತರದ ೭ ಕಂಬಗಳನ್ನು ಒಳಗೊಂಡಿದೆ. ಇದರ ಎಡಭಾಗದಲ್ಲಿ ಕಂಡು ಬರುವ ಕಟ್ಟಗಳೆಂದರೆ ಬಂಧಿಖಾನೆ ಮತ್ತು ಮದ್ದಿನ ಮನೆ. ಬಂಧಿಖಾನೆಯು ೧೪ ಅಡಿಗಳ ಎತ್ತರ ೧೫ ಉದ್ದ೪ ಅಡಿ ಅಗಲವನ್ನು ಹೊಂದಿದೆ. ಎತ್ತರದ ಕಂಬಗಳ ಸಹಾಯದಿಂದ ಛಾವಣಿಯ ಮೇಲೆ ಅಡ್ಡೆಗಳನ್ನು ಹಿಡಿಸಲಾಗಿದ್ದು ಇಂದು ಛಾವಣಿ ನಶಿಸಿದೆ. ಆದರ ಪಕ್ಕದಲ್ಲಿರುವ ಮದ್ದಿನ ಮನೆಯನ್ನು ಪ್ರವೇಶಿಸಲು ಜನಸಾಮಾನ್ಯರಿಂದ ಸಾಧ್ಯವಿಲ್ಲದ ರೀತಿ

ನಿರ್ಮಿಸಲಾಗಿದೆ. ೩ ಅಡಿ ಉದ್ದ ೩ ಅಡಿ ಅಗಲ ಬಾಗಿಲು ೨ ಅಡಿ ಎತ್ತರದಲ್ಲಿ ಇಡಲಾಗಿದೆ . ಒಳ ಪ್ರವೇಶಿಸಲು ಮೆಟ್ಟಿಲುಗಳಿಲ್ಲ ಒಳಭಾಗದಲ್ಲಿ ಉಷ್ಣತೆ ಹೆಚ್ಚು ಇರುವುದರಿಂದ ಗಾರೆಯಿಂದ ಕಟ್ಟಲಾಗಿದ್ದು ಬೆಳಕಿನ ಕಿಂಡಿ ಮಾಡಲಾಗಿದೆ. ಇದು ಸಹ ತುಪ್ಪದ ಕಣಜದ ಅಳತೆ ಹೊಂದಿದೆ. ಇದರ ಮುಭಾಗದಲ್ಲಿ ಅನೇಕ ಕಟ್ಟಡಗಳ ಅವಶೇಷಗಳು ಕಂಡು ಬರುತ್ತವೆ. ೪ ನೇ ದ್ವಾರದ ಮೂಲಕ ಒಳ ಪ್ರವೇಶಿಸಿದರೆ ಅಲ್ಲಿ ಗರಡಿ ಮನೆ ಕಂಡು ಬರುತ್ತದೆ. ಇದು ಅಂದಿನ ಸೈನಿಕರು ತಮ್ಮ ಕಾರ್ಯ ಸಾಹಸಗಳನ್ನು ಕೈಗೊಳ್ಳಲು ತೂಕದ ಗುಂಡುಗಳನ್ನು ಎತ್ತುವ ಕೆಲಸದಲ್ಲಿ ತೊಡಗುತ್ತಿದ್ದ ಕೋಣೆಯನ್ನು ಕಾಣಬಹುದಾಗಿದ್ದು ಚೌಕಕಾರದಲ್ಲಿದ್ದು ೪ ಅಡಿ ಎತ್ತರ ೪ ಅಡಿ ಅಗಲದ ಬಾಗಿಲನ್ನು ಒಳಗೊಂಡಿದ್ದು ಛಾವಣಿಯು ಗಾರೆ ಮತ್ತು ಬಂಡೆಯಿಂದ ನಿರ್ಮಿಸಲಾಗಿದೆ. ಇದು ಕೊನೆಯ ಹಂತವಾಗಿದೆ. ನಂತರ ಹಿಂದಕ್ಕೆ ಬಂದು ೩ ನೇ ಬಾಗಿಲಿನಿಂದ ಹೊರನಡೆದರೆ ಎಮ್ಮೆ ದೊಣೆಯ ಮೇಲ್ಭಾಗದ ೪ ನೇ ಪ್ರವೇಶದ್ವಾರ ಕಂಡುಬರುತ್ತದೆ. ಈ ಪ್ರವೇಶದ್ವಾರವು ವಿಜಯನಗರ ಶೈಲಿಯಲ್ಲಿ ಕಂಡು ಬಂದಿದ್ದು ಲಲಾಟದಲ್ಲಿ ಚಕ್ರ ಕೆತ್ತಲಾಗಿದೆ. ಇದರ ಮೂಲಕ ಮುಂದೆ ಪ್ರವೇಶಿಸಿದರೆ ಕಂಡು ಬರುವ ಕಟ್ಟಡವೆಂದರೆ ಅರಮನೆಯ ಕಟ್ಟಡ ಇದು ಮುಖ್ಯ ದ್ವಾರವನ್ನು ಒಳಗೊಂಡಿದ್ದು , ದಕ್ಷಿಣ ಮತ್ತು ಉತ್ತರ ಬಾಗಿಲು ಒಳಗೊಂಡಿದೆ. ದಕ್ಷಿಣದ ಬಾಗಿಲಿನಿಂದ ಪ್ರವೇಶಿಸಿದರೆ ಜಗತಿ ಕಂಡು ಬಂದು ನಂತರ ವಿಶಾಲವಾದ ಕೊಠಡಿ ಇದೆ. ಮೂರು ದಿಕ್ಕುಗಳಿಗೂ ಜಗತಿ ಇದ್ದು ಕುಳಿತುಕೊಳ್ಳುವ ರೀತಿ ರಚಿಸಲಾಗಿದೆ ಈ ಕೋಣೆಯ ಕಲ್ಲುಕಂಬಗಳು ಉತ್ತಮ ಕೆತ್ತನೆಯಿಂದ ಕೂಡಿವೆ. ಕೋಣೆಯಿಂದ ಉತ್ತರಕ್ಕೆ ಸಮಾನ ವಿಸ್ತೀರ್ಣವುಳ್ಳ ೪ ಕೋಣೆಗಳನ್ನು ಕಾಣಬಹುದು. ಅವುಗಳಲ್ಲಿ ಒಂದು ಅಡುಗೆ ಕೋಣೆ ಎಂದು ಅಲ್ಲಿರುವ ಒಳಕಲ್ಲು ಮತ್ತು ಬೂದಿಯ ಬಗೆಯ ಅವಶೇಷಗಳಿಂದ ತಿಳಿಯಬಹುದಾಗಿದೆ. ಈ ಕೋಣೆಗಳು ಸಾಲಾಗಿವೆ. ಕೋಣೆ ದಾಟಿದರೆ ಉತ್ತರದ ಬಾಗಿಲು ಕಂಡು ಬರುತ್ತದೆ. ಎಡ ಮತ್ತು ಬಲಭಾಗದಲ್ಲಿ ಕಾವಲುಗಾರರ ಕಟ್ಟಡಗಳು ಇದ್ದು, ಇದರ ಬಲಭಾಗದಲ್ಲಿರುವ ವಿಶಾಲವಾದ ರಕ್ಷಣಾ ಜಾಗ ಅಥವ ಬತೇರು ಇದು ಪೂರ್ವದಿಂದ ಬರುವ ಶತ್ರುಗಳ ವೀಕ್ಷಣೆಗೆ ಬಳಸಲಾಗುತ್ತಿತ್ತು. ಅಲ್ಲದೆ ಬಂದೂಕು ಕಿಂಡಿಯನ್ನು ಇಲ್ಲಿ ಕಾಣಬಹುದಾಗಿದೆ.

ಅರಮನೆಯ ಕೆಳಭಾಗದಲ್ಲಿ ೮ ಅಡಿ ಅಗಲದ ಈಜುಕೊಳ ನಿರ್ಮಿಸಲಾಗಿದೆ. ಇದಕ್ಕೆ ಸ್ವಾಭಾವಿಕ ಬಂಡೆಯ ಜೊತೆಗೆ ಗಾರೆಯನ್ನು ಬಳಸಿ ಎತ್ತರವಾಗಿ ನಿರ್ಮಿಸಲಾಗಿದ್ದು ಮೆಟ್ಟಿಲುಗಳನ್ನು ಒಳಗೊಂಡಿದೆ. ಮಧ್ಯದಲ್ಲಿ ಗೂಡು ನಿರ್ಮಿಸಲಾಗಿದ್ದು, ನೀರು ಹರಿದುಹೋಗಲು ವ್ಯವಸ್ಥೆ ಮಾಡಲಾಗಿದೆ. ಇದರ ಹಿಂಭಾಗದಲ್ಲಿ ಅನೇಕ ಅರೆಯುವ ಕಲ್ಲುಗಳನ್ನು ಕಾಣಬಹುದಾಗಿದೆ. ಜೊತೆಗೆ ೪ ಅಡಿ ಅಗಲದ ಬೀಸುವ ಕಲ್ಲುಗಳನ್ನು ಒಳಗೊಂಡಿದ್ದು ಗಾರೆಯ ದಿಮ್ಮಿ ಇಂದಿಗೂ ಕಂಡು ಬರುತ್ತದೆ. ಈ ಕೋಟೆಯ ಆವರಣದಲ್ಲಿ ಅನೇಕ ಕಟ್ಟಡಗಳ ಅವಶೇಷಗಳನ್ನು ಕಾಣಬಹುದಾಗಿದೆ. ಇದರ ಮೂಲಕ ೫ ನೇ ಕೋಟೆಯನ್ನು ಪ್ರವೇಶಿಸಿದರೆ ಪ್ರವೇಶದ ದ್ವಾರವು ವಿಜಯನಗರದ ಶೈಲಿಯಲ್ಲಿಯೇ ನಿರ್ಮಿಸಲಾಗಿದೆ.

ಬಾಗಲಿ ಲಲಾಟದಲ್ಲಿ ಚಕ್ರವನ್ನು ಕೆತ್ತಲಾಗಿದೆ. ಎಡ ಮತ್ತು ಬಲಭಾಗದಲ್ಲಿ ನಗ್ನ ಸ್ತ್ರೀ ಶಿಲ್ಪವು

ಕೇಶವನ್ನು ಗಂಟು ಹಾಕಿದ ರೀತಿಯಲ್ಲಿ ಶಿಲ್ಪ ಕೆತ್ತಲಾಗಿದೆ. ಅಲ್ಲದೆ ೧೫ ಅಡಿ ಆಳದ ವಿಶಾಲವಾದ ಬಾವಿಯನ್ನು ನಾವು ಕಾಣಬಹುದಾಗಿದೆ. ಇದಕ್ಕೆ ೯ ಅಡಿ ಎತ್ತರದ ವರೆಗೆ ಗೋಡೆಯನ್ನು ನಿರ್ಮಿಸಲಾಗಿದೆ ಅದರ ಮೇಲ್ಭಾಗದಲ್ಲಿ ೬ ಅಡಿ ಎತ್ತರದವರೆಗೆ ಗಾರೆ ಮತ್ತು ಇಟ್ಟಿಗೆಯಿಂದ ಗೋಡೆಯನ್ನು ನಿರ್ಮಿಸಲಾಗಿದ್ದು ಈ ಗೋಡೆಯ ರಚನೆಯು ಇಂಗ್ಲಿಷ್ ಅಕ್ಷರವಾದ 'ಎಸ್ ' ಆಕಾರದ ರೀತಿ ರಚಿಸಲಾಗಿದೆ. ಇದರ ಮೂಲಕ ಅರಮನೆಗೆ ಬೇರುವ ನೀರನುನ ಸರಬರಾಜು ಮಾಡಲಾಗುತ್ತಿತ್ತು. ನೀರನ್ನು ಸ್ವಚ್ಚಗೊಳಿಸಲು ಬಾವಿಯ ತಳಭಾಗದಲ್ಲಿ ರಂದ್ರವನ್ನು ಕೊರೆಯಲಾಗಿದ್ದು ಹೆಚ್ಚುವರಿ ನೀರು ಹೊರ ಹರಿಯಲು ವ್ಯವಸ್ಥಿತವಾಗಿ ಮಾಡಲಾಗಿದೆ.

ಅದೇ ರೀತಿ ಮುಂದೆ ಸಾಗಿದರೆ ೬ ನೇ ಕೋಟೆಯು ದೊರೆಯುತ್ತದೆ. ಬಾಗಿಲ ರಚನೆಯಲ್ಲಿ ಯಾವುದೇ ರೀತಿಯ ವ್ಯತ್ಯಾಸವಿಲ್ಲ. ಇಲ್ಲಿ ವಿಶಾಲವಾದ ಪ್ರಾಂಗಣವಿದ್ದು ಗಾರೆಯಿಂದ ನಿರ್ಮಿಸಿದ ಕಲ್ಲಿನ ಕೆಲವು ನಾಶ ಹೊಂದಿದ ಕಟ್ಟಡಗಳನ್ನು ಕಾಣಬಹುದಾಗಿದೆ. ಈ ಕಟ್ಟಡದ ಪಕ್ಕದಲ್ಲಿಯೇ ಬತೇರಿಯನ್ನು ಕಾಣಬಹುದಾಗಿದೆ. ಇದು ದಕ್ಷಿಣ ದಿಕ್ಕಿನ ಕಡೆ ರಚಿಸಲಾಗಿದೆ. ಪಿರಂಗಿಯನ್ನು ನಿಲ್ಲಿಸುವ ಸಲುವಾಗಿ ವಿಶಾಲವಾಗಿದ್ದು ಇಳಿಜಾರಿನಿಂದ ಕೂಡಿದ್ದು ಪಿರಂಗಿ ತಳ್ಳಳು ಹಾಗು ಮಧ್ಯೆ ಸಿಕ್ಕಿಸಲು ಕಿಂಡಿಗಳನ್ನು ಕಾಣಬಹುದಾಗಿದೆ.

೩ ನೇ ಕೋಟೆಯನ್ನು ಕುಂಬಿಕೋಟೆ ಎಂದು ಸ್ಥಳೀಯರು ಕರೆಯುತ್ತಾರೆ.ಇದು ದುರ್ಗದ ಎತ್ತರವಾದ ಮತ್ತು ಕೋಟೆಯ ಭಾಗವಾಗಿದೆ. ಮುಖ್ಯದ್ವಾರದ ಕೋಟೆಯನ್ನು ದೊಡ್ಡ ಪ್ರಮಾಣದ ಕಲ್ಲು ಬಳಸಿ ಕಟ್ಟಲಾಗಿದೆ. ಇದರ ಒಳ ಪ್ರವೇಶಿಸಿದರೆ ಗಾರೆ ಇಟ್ಟಿಗೆಯಿಂದ ನಿರ್ಮಿಸಿದ ಕೋಟೆ ಗೋಡೆಗಳನ್ನು ಕಾಣಬಹುದು. ಈ ಅಂತಿಮ ಸುತ್ತಿನಕೋಟೆಯನ್ನು ಮೈಸೂರಿನ ಅರಸನಾದ ಕೊಲ್ಲೂರಯ್ಯನು ನಿರ್ಮಿಸಿದನೆಂದು ತಿಳಿಯಬಹುದಾಗಿದೆ. ಆದರೆ ಇದಕ್ಕೆ ಸಂಬಂಧಿಸಿದ ಯಾವುದೇ ಶಾಸನ ದಾಖಲಾತಿಯು ಸಿಕ್ಕಿಲ್ಲ. ಇಲ್ಲಿ ಬಿದ್ದ ನೀರು ಸರಾಗವಾಗಿ ಕೆಳಹೋಗಲು ಜಲಕಿಂಡಿಯನ್ನು ಮಾಡಲಾಗಿದೆ. ಜೊತೆಗೆ ಶೌಚಾಲಯವನ್ನು ಇಟ್ಟಿಗೆ ಗಾರೆಯ ಗೋಡೆಯಿಂದ ನಿರ್ಮಿಸಲಾಗಿದೆ. ಕೆಳಭಾಗದಲ್ಲಿ ಕಲ್ಲನ್ನು ಬಳಸಲಾಗಿದ್ದು ಶೌಚಾಲಯದ ಗುಂಡಿ ಒಳಗೊಂಡಿಲ್ಲ. ಇಲ್ಲಿಯೂ ಕೂಡ ಅನೇಕ ಕಟ್ಟಡದ ಅವಶೇಷಗಳು ಕಂಡು ಬಂದಿವೆ. ಆದರೆ ಯಾವುದೇ ದೇವಾಲಯ ಕಂಡು ಬಂದಿಲ್ಲ. ಸುತ್ತಲು ಇಟ್ಟಿಗೆಯ ಗೋಡೆಯಲ್ಲಿ ಬಂದೂಕು ಕಿಂಡಿಗಳನ್ನು ನಿರ್ಮಿಸಲಾಗಿದ್ದ ಶತೃಗಳ ರಕ್ಷಣೆಗೆ ಹೇಳಿ ಮಾಡಿಸಿದ ರೀತಿ ಕಂಡು ಬರುತ್ತದೆ.

ಮೊದಲ ದ್ವಾರದಿಂದ ಬಲಭಾಗಕ್ಕೆ ಚಲಿಸಿದರೆ ಸುತ್ತಲೂ ಬಂದೂಕು ಕಿಂಡಿಗಳು ಬತೇರಿಗಳು ಕಂಡು ಬರುತ್ತವೆ. ಅಲ್ಲದೆ ಪಿರಂಗಿಯನ್ನು ಸಾಗಿಸಲು ವಿಶಾಲವಾದ ಸುಮಾರು ೩ ಅಡಿ ಅಗಲದ ರಸ್ತೆಯ ರೂಪದಲ್ಲಿ ರಚಿಸಲಾದ ವೇದಿಕೆಯು ಕಾಣಬಹುದು. ಇದರ ಮೇಲೆ ನಡೆದರೆ ಅನೇಕ ಬತೇರಿಗಳನ್ನು ನಾವು

ನೋಡಬಹುದು. ಈ ರಸ್ತೆಯ ಸಹಾಯದಿಂದ ಶಸ್ತ್ರಗಳ ಮೇಲೆ ಮದ್ದುಗಳನ್ನು ಸಿಡಿಸಲು ಸಹಾಯವಾಗುವಂತೆ ಸುತ್ತಲೂ ಕಿಂಡಿಗಳನ್ನು ನಿರ್ಮಿಸಲಾಗಿದೆ.

ಈ ಮಂಟಪದ ಮೇಲ್ಭಾಗದಲ್ಲಿ ಮುಖ್ಯ ಬತೇರಿ ಇದ್ದು ೧೫ ಅಡಿ ಎತ್ತರವಿದ್ದು ದೊಡ್ಡದಾದ ಬತೇರಿಯಾಗಿದೆ. ಇದು ವಿಶಾಲವಾದ ಇಳಿಜಾರನ್ನು ಒಳಗೊಂಡು ಫಿರಂಗಿ ಸಾಗಿಸಲು ಸಹಾಯಕವಾಗುವಂತೆ ನಿರ್ಮಿಸಲಾಗಿದ್ದು ಉತ್ತರದ ಕಡೆಯಿಂದ ಬರುವ ಶತ್ರುಗಳನ್ನು ವೀಕ್ಷಿಸಲು ಬಳಸಲಾಗುತ್ತಿತ್ತು . ಇಲ್ಲಿಯೂ ಕೂಡ ಕಾವಲು ಮಂಟಪ ಇದೆ. ಜೊತೆಗೆ ಭತ್ತದ ಕಣಜವಿದ್ದು ೩ಅಡಿ ಎತ್ತರದ ವೇದಿಕೆ ಮೇಲೆ ನಿರ್ಮಿಸಿದ್ದು ೪ ಕಂಬಗಳಿದ್ದು ಪ್ರತಿ ಕಂಬದಲ್ಲಿಯು ಪೂರ್ಣಕುಂಭ, ಕಮಲ, ಮಂಗನ ಕೆತ್ತನೆಯನ್ನು ಕಾಣಬಹುದು. ಇಲ್ಲಿ ಭತ್ತದ ಒಟ್ಟು ದೊರೆಯಿತು ಇಲ್ಲಿರುವ ಭತ್ತದ ಕಣ ಎಂದು ಸೃಷ್ಟಿಪಡಿಸಬಹುದಾಗಿದೆ. ಮುಂದೆ ನಡೆದರೆ ಮಧುಗಿರಿ ಬಾಗಿಲು ಕಂಡು ಬರುತ್ತದೆ. ಈ ಬಾಗಿಲ ಲಲಾಟದಲ್ಲಿ ಗಣೇಶನ ಶಿಲ್ಪ ಕೆತ್ತಲಾಗಿದ್ದು ಬಾಗಿಲ ಎಡಬಲದಲ್ಲಿ ಹೂಗಳ ಶಿಲ್ಪ ಕೆತ್ತಲಾಗಿದ್ದು ಈ ಬಾಗಿಲ ಎದುರಿಗೆ ಸ್ವಾಭಾವಿಕ ಬಂಡೆಯಲ್ಲಿ ೪ ಅಡಿ ಎತ್ತರದ ಆಂಜನೇಯ ಶಿಲ್ಪವನ್ನು ಕೆತ್ತಲಾಗಿದ್ದು, ಈ ಬಾಗಿಲ ಎದುರಿಗೆ ಸ್ವಾಭಾವಿಕ ಬಂಡೆಯಲ್ಲಿ ೪ ಅಡಿ ಮಂಟಪ ರಚಿಸಿದ್ದು ನಾಶವಾಗಿದೆ. ಈ ಬಾಗಿಲ ಮೇಲ್ಭಾಗದಲ್ಲಿ ಶಾಲೆಯ ಅರ್ಧ ಕಮಾನಿನ ಗೋಪುರ ಅಥವಾ ಅರ್ದ ಎಲೆಯಾಕಾರದ ಮತ್ತು ಮದ್ಯದಲ್ಲಿ ವಜ್ರಕೃತಿಯ (ಚೌಕ) ರೀತಿಯಲ್ಲಿ ರಚಿಸಲಾಗಿದ್ದು ಇದರ ಕೆಳಗೆ ೨ ಪಟ್ಟಿ ಬಂದಿದ್ದ ಹೂ, ಚಿತ್ರ, ತೋರಣಗಳ ಪಟ್ಟಿ ಕೆತ್ತಲಾಗಿದೆ. ಇದರ ಕೆಳಭಾಗಕ್ಕೆ ಇಳಿಯಲು ಮೆಟ್ಟಿಲುಗಳನ್ನು ಕಲ್ಲಿನಿಂದ ನಿರ್ಮಿಸಲಾಗಿದ್ದು, ಕೆಳಭಾಗದಲ್ಲಿ ಅಂದು ಪ್ರತಿ ಸೋಮವಾರ ಸಂತೆ ನಡೆಯುತ್ತಿತ್ತು ಎಂದು ಅಲ್ಲಿನ ಸ್ಥಳಿಯರು ಹೇಳುತ್ತಾರೆ. ಈ ಸ್ಥಳವನ್ನು ಇಂದಿಗೂ ಸಂತೆ ಬಯಲು ಎಂದು ಕರೆಯಲಾಗಿದೆ. ಈ ಬಯಲಲ್ಲಿ ಆಂಜನೇಯನ ವಿಗ್ರಹ ಕೆತ್ತಲಾಗಿದ್ದು ಇದನ್ನು ವ್ಯಾಪಾರಸ್ಥರೇ ನಿರ್ಮಿಸಿದರೆಂಬ ಪ್ರತೀತಿ ಇದೆ. ಈ ಬೆಟ್ಟದಲ್ಲಿ ೨ ಫಿರಂಗಿಗಳಿದ್ದವು ಅವುಗಳನ್ನು ಗಣಿ ಕಳ್ಳರು ಈಶ್ವರ ದೊಣೆಗೆ ತಳ್ಳಿ ಹಾಕಿದ್ದಾರೆ ಎಂದು ಅಲ್ಲಿನ ಸ್ಥಳೀಯರು ತಿಳಿಸುತ್ತಾರೆ. ಒಟ್ಟಾರೆಯಾಗಿ ಚನ್ನರಾಯನದುರ್ಗವು ಉತ್ತಮವಾದ ಕೋಟೆಯ ರಚನೆಯಾಗಿದ್ದು ಈ ದುರ್ಗದ ಮೇಲೆ ಅನೇಕ ಸ್ಮಾರಕಗಳು ಸಹ ಕಂಡು ಬಂದಿವೆ. ಅವುಗಳನ್ನು ಈ ಕೆಳಕಂಡಂತೆ ತಿಳಿಯೋಣ.

**ಕೋಟೆಯೊಳಗೆ ಕಂಡು ಬರುವ ಸ್ಮಾರಕಗಳು**

**೫.೨ ಕಣಜಗಳು**

ಕಣಜಗಳು ಕೋಟೆಯ ಸ್ಮಾರಕಗಳಲ್ಲಿ ಅತೀ ಮುಖ್ಯವಾದ ಭಾಗಗಳೆಂದರೆ ತಪ್ಪಾಗಲಾರದು. ದುರ್ಗದಲ್ಲಿ ಬಹಳ ವರ್ಷಗಳ ಕಾಲ ಕೆಡದೆ ಉಪಯೋಗಿಸಲು ಯೋಗ್ಯವಾದ ೨೨ ವಸ್ತುಗಳನ್ನು ಸಂಗ್ರಹಿಸಬೇಕೆಂದು ಕೌಟಿಲ್ಯನು ತನ್ನ ಕೃತಿಯಾದ ಅರ್ಥಶಾಸ್ತ್ರದಲ್ಲಿ ಹೇಳಿದ್ದಾನೆ. ಈ ರೀತಿಯ ವಸ್ತುಗಳನ್ನು ಸಂಗ್ರಹಿಸುವ ಸ್ಮಾರಕಗಳೇ ಕಣಜಗಳಾಗಿವೆ. ಒಟ್ಟಾರೆಯಾಗಿ ಇದು ಧಾನ್ಯಗಳನ್ನು ಸಂಗ್ರಹಿಸುವ ಸ್ಥಳವಾಗಿದೆ. ಎಲ್ಲಾ ಸಂಗ್ರಹಗಳಿಗಿಂತಲೂ ಮುಖ್ಯವಾದದ್ದು ಧಾನ್ಯಸಂಗ್ರಹವೆಂದು ನೀತಿವಾಕ್ಯಮೃತದಲ್ಲಿ ಹೇಳಲಾಗಿದೆ.[೮] ಈ ಕಣಜಗಳನ್ನು ವೃತ್ತಾಕಾರವಾಗಿ ಚೌಕಾಕಾರವಾಗಿ ರಚಿಸುವರು ಇದರ ನಿರ್ಮಾಣದಲ್ಲಿ ಕಲ್ಲು ಇಟ್ಟಿಗೆ ಮತ್ತು ಗಾರೆಯನ್ನು ಬಳಸಿರುವರು. ಚನ್ನರಾಯನದುರ್ಗ ಪರಿಸರದಲ್ಲಿ ಇಂತಹ ಅನೇಕ ಕಣಜಗಳನ್ನು ನಾವು ನೋಡಬಹುದು. ಇವು ಕೋಟೆಯೊಳಗಿನ ವ್ಯಕ್ತಿಗಳಿಗೆ ಆಹಾರ ಒದಗಿಸುವಂತಹವುಗಳಾಗಿದ್ದವು. ಇಲ್ಲಿನ ಪ್ರಮುಖ ಕಣಜಗಳೆಂದರೆ ಭತ್ತದ ಕಣಜ, ತುಪ್ಪದ ಕಣಜ, ಉಪ್ಪಿನ ಕಣಜಗಳು ಪ್ರಮುಖವಾಗಿವೆ. ಇವುಗಳ ರಚನೆ ಯಾವ ರೀತಿಯಲ್ಲಿವೆ ಅದನ್ನು ನಿರ್ಮಿಸಲು ಉಪಯೋಗಿಸಿರುವ ಕಚ್ಚಾವಸ್ತುಗಳು ಹಾಗು ಅವುಗಳ ಉಪಯೋಗವನ್ನು ಈ ಕೆಳಕಂಡಂತೆ ವಿವರವಾಗಿ ತಿಳಿಯೋಣ.

ಚನ್ನರಾಯನದುರ್ಗ ಕೋಟೆಯನ್ನು ದಕ್ಷಿಣದ ಬಾಗಿಲಿನಿಂದ ಪ್ರವೇಶಿಸಿದಾಗ ೯೦° ಕೋನದಲ್ಲಿ ಕೋಟೆ ಗೋಡೆಯ ಎಡಕ್ಕೆ ತಿರುಗಿದರೆ ನಮಗೆ ಕಂಡುಬರುವುದು ಭತ್ತದ ಕಣಜ ಇದು ೪ ಅಡಿ ಎತ್ತರ ೧೦ ಮೀ ಹೊಂದಿದೆ. ಈ ಜಗತಿಯ ಮೇಲ್ಭಾಗದಲ್ಲಿ ಮಣ್ಣು ಮತ್ತು ಕಲ್ಲುಗಳಿಂದ ಎತ್ತರವಾದ ಗೋಡೆ ನಿರ್ಮಿಸಲಾಗಿದೆ. ಇದರ ಛಾವಣಿಯನ್ನು ಮಧ್ಯಮಗಾತ್ರದ ಕಲ್ಲುಗಳಿಂದ ಮುಚ್ಚಲಾಗಿದೆ. ಈ ಛಾವಣಿಯನ್ನು ಹೊತ್ತು ನಿಂತ ಕಂಬಗಳು ಸುಮಾರು ೬ ಅಡಿಗಳಷ್ಟು ಎತ್ತರ ಹೊಂದಿದ್ದು, ಸಾಧಾರಣ ಕೆತ್ತನೆಯಿಂದ ಕೂಡಿದೆ. ಹಾಗು ಬೋಧನೆಯನ್ನು ಹೊಂದಿ ಪ್ರತಿ ಜಗತಿಯಲ್ಲಿ ೩ ಅರ್ಧ ಕಂಬಗಳು ೩ ಪೂರ್ಣ ಕಂಬಗಳನ್ನು ಹೊಂದಿವೆ. ಪ್ರವೇಶದ್ವಾರದ ಬಲಭಾಗದಲ್ಲಿ ೨ ೧/೨ ಅಡಿ ಎತ್ತರ ೨ ೧/೨ ಅಗಲದ ಚಿಕ್ಕ ಬಾಗಿಲು ಒಳಗೊಂಡಿದ್ದು ರಹದಾರಿಯಾಗಿ ಬಳಸಲಾಗಿದೆ. ಬಾಗಿಲ ಪಕ್ಕದಲ್ಲಿ ಕಹಳೆ ಊದುತ್ತಿರುವ ಶಿಲ್ಪವನ್ನು ಕಡೆಯಲಾಗಿದೆ. ಈ ಎರಡು ಜಗತಿಯಲ್ಲಿ ಈಗಲೂ ಸಹ ಭತ್ತದ ಅವಶೇಷಗಳನ್ನು ಕಾಣಬಹುದು. ಅದೇ ರೀತಿಯಲ್ಲಿ ಅರಮನೆಯ ಮುಂದಿನ ಮುಖ್ಯದ್ವಾರದ ಬಳಿ ಎಡ ಮತ್ತು ಬಲಭಾಗದಲ್ಲಿ ಎರಡು ಅಡಿ ಎತ್ತರದ ಜಗತಿ ಇದೆ. ಜಗತಿಯ ಮೇಲಣ ಬಿತ್ತಿಯನ್ನು ಕಲ್ಲು ಮತ್ತು ಮಣ್ಣನ್ನು ಬಳಸಿ ಕಣಜ ನಿರ್ಮಿಸಲಾಗಿದ್ದು ಇದರ ಉದ್ದವು ೧೨ ಅಡಿ ಒಳಗೊಂಡಿದ್ದು ಪ್ರತಿಭಾಗದಲ್ಲಿ ೩

ಕಂಬಗಳನ್ನು ಒಳಗೊಂಡಿವೆ. ಈ ಕಂಬಗಳು ಸಾಧಾರಣಾ ಕೆತ್ತನೆಯಿಂದ ಕೂಡಿದ್ದು ಪೂರ್ಣಕುಂಬ , ನವಿಲು ವಾನರಗಳ ಚಿತ್ರವನ್ನು ಕಡೆಯಲಾಗಿದ್ದು, ಇಂದಿಗೂ ಕ್ಷೇತ್ರ ಕಾರ್ಯದ ಸಮಯದಲ್ಲಿ ಭತ್ತದ ಒಟ್ಟು ದೊರೆತ್ತಿದ್ದರಿಂದ , ಇದು ಭತ್ತದ ಕಣಜ ಎಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

ಹೀಗೆ ಚನ್ನರಾಯನ ದುರ್ಗದ ಕೋಟೆಯಲ್ಲಿ ಬರಗಾಲದ ಸಂದರ್ಭದಲ್ಲಿ ಆಹಾರಕ್ಕೆ ಕೊರತೆ ಉಂಟಾಗಬಹುದೆಂಬು ಮುಂದಾಲೋಚನೆಯಿಂಬಲೋ ಅಥವ ಶತ್ರುಗಳು ಕೋಟೆಯನ್ನು ಮುತ್ತಿದ್ದ ಸಂದರ್ಭದಲ್ಲಿ ಆಹಾರಕ್ಕೆ ತೊಂದರೆಯಾಗುತ್ತದೆ ಎಂಬ ಕಾರಣಕ್ಕಾಗಿಯೋ, ಕಣಜಗಳ ನಿರ್ಮಾಣಕ್ಕೆ ಹೆಚ್ಚಿನ ಪ್ರಾದಾನ್ಯತೆ ನೀಡಿರುವುದನ್ನು ನಾವು ಇಂದಿಗೂ ಕಾಣಬಹುದಾಗಿದೆ.

ಕೋಟೆಯ ದಕ್ಷಿಣ ಬಾಗಿಲಿನಿಂದ ಪ್ರವೇಶಿಸಿದಾಗ ಇದರ ರಚನೆಯು ಗಾರೆ ಮತ್ತು ಮಧ್ಯಮ ಗಾತ್ರದ ಕಲ್ಲು ಹಾಗು ಇಟ್ಟಿಗೆಗಳನ್ನು ಬಳಸಿ ನಿರ್ಮಿಸಲಾಗಿದೆ. ಈಶ್ವರ ದೇವಾಲಯದ ಹಿಂಬದಿಯಲ್ಲಿ ಕಂಡು ಬರುವುದೇ ಉಪ್ಪಿನ ಕಣಜ. ಉಪ್ಪನ್ನು ಅಡಿಗೆಯಿಂದ ಹಿಡಿದು ಇತರೆ ಉಪಯೋಗಕ್ಕೂ ಬಳಸಲಾಗುತ್ತದೆ. ಸಾಮಾನ್ಯವಾಗಿ ಅಂದು ಈ ಉಪ್ಪಿನ ಕಣಜವನ್ನು ಉಪಯೋಗಿಸುತ್ತಿದ್ದು ಪಕ್ಕದಲ್ಲೇ ಎಮ್ಮೆ ಮುಸುರೆ ದೊಣೆ ಇದೆ. ಮುಸುರೆಗೆ ಉಪ್ಪನ್ನು ಹಾಕಿ ಜಾನುವಾರುಗಳಿಗೆ ಕುಡಿಸುತ್ತಿದ್ದರು. ಜೊತೆಗೆ ಈ ಉಪ್ಪನ್ನು ಆಹಾರಕ್ಕೂ ಬಳಸುತ್ತಿದ್ದರೆನ್ನಬಹುದು. ಉಪ್ಪಿನ ಕಣಜವು ಸುಮಾರು ೬ ಅಡಿ ಎತ್ತರವಿದ್ದು ಅದರಲ್ಲಿ ೪ ಅಡಿಗಳಷ್ಟು ಸಾಧಾರಣ ಗಾತ್ರದ ಕಲ್ಲುಗಳಿಂದ ಹಾಗು ೨ ಅಡಿಗಳಷ್ಟು ಗಾರೆಯಿಂದ ಕಟ್ಟಲಾಗಿದೆ.ಇದರ ಮೇಲ್ಚಾವಣಿಯನ್ನು ಹೊತ್ತು ಒಳಭಾಗದಲ್ಲಿ ೨ ಕಂಬಗಳನ್ನು ನಿಲ್ಲಿಸಲಾಗಿದೆ. ಇದರ ಮೇಲ್ಚಾವಣಿಯನ್ನು ದೊಡ್ಡ ಗಾತ್ರದ ಕಲ್ಲುಗಳ ಸಹಾಯದಿಂದ ಮುಚ್ಚಲಾಗಿದೆ. ನಂತರದಲ್ಲಿ ಗಾರೆಯಿಂದ ಭದ್ರಪಡಿಸಲಾಗಿದೆ. ಈ ಕಣಜವನ್ನು ವೃತ್ತಾಕಾರದಲ್ಲಿ ನಿರ್ಮಿಸಲಾಗಿದೆ. ಇದರ ಬಾಗಿಲು ೩ ಅಡಿ ಎತ್ತರ ೨ ೧/೨ ಅಗಲ ಹೊಂದಿದ್ದು ಉತ್ತರಕ್ಕೆ ಮುಖ ಮಾಡಿದೆ. ಈ ಕಣಜದಲ್ಲಿ ಇಂದಿಗೂ ಸಹ ಮಣ್ಣು ತೇವಾಂಶದಿಂದ ಕೂಡಿರುವುದನ್ನು ಕಾಣಬಹುದು. ಆದ್ದರಿಂದ ಇದನ್ನು ಸ್ಪಷ್ಟವಾಗಿ ಉಪ್ಪಿನ ಕಣಜ ಎಂದು ಗುರುತಿಸಲಾಗಿದೆ.

ತುಪ್ಪದ ಕಣಜಗಳು ಸಾಮಾನ್ಯವಾಗಿ ಎಲ್ಲಾ ಕೋಟೆಯೊಳಗೆ ನಿರ್ಮಿಸಲಾಗಿದೆ ಎಂದರೆ ತಪ್ಪಾಗಲಾರದು. ಕಾರಣ ಅಂದಿನ ಪಾಳೆಗಾರರು, ದಂಡನಾಯಕರು ಅವರ ಸಿಬ್ಬಂದಿ ವರ್ಗವೆಲ್ಲವೂ ದುರ್ಗದ ಒಳಾಂಗಣದಲ್ಲಿಯೇ ನೆಲೆಸಿರುತ್ತಿದ್ದ ಕಾರಣ ಅವರಿಗೆ ಬೇಕಾದ ಎಲ್ಲಾ ಪ್ರಮುಖ ವಸ್ತುಗಳನ್ನು ಶೇಖರಿಸಿಡುವ ಉಗ್ರಾಣಗಳನ್ನು ಅಂದು ನಿರ್ಮಿಸುತ್ತಿದ್ದರು. ತುಪ್ಪವನ್ನು ಸಹಾ ಶೇಖರಿಸಲು ಕಣಜಗಳನ್ನು ಬಳಸುತ್ತಿದ್ದರು. ಅದೇ ರೀತಿಯಲ್ಲಿ ಚನ್ನರಾಯನ ದುರ್ಗ ಕೋಟೆಯಲ್ಲಿಯೂ ತುಪ್ಪದ ಕಣಜವನ್ನು ನಾವು ಕಾಣಬಹುದು. ಇದು ಕೇಶವನ ದೇವಾಲಯದ ಮೇಲ್ಭಾಗದಲ್ಲಿ ಆಡಳಿತ ವರ್ಗಗಳ ವಸತಿ ನಿವೇಶನ ಎದುರಿಗೆ ಕಂಡು ಬರುತ್ತದೆ. ಇದನ್ನು ಮಧ್ಯಮ ಗಾತ್ರದ ಕಲ್ಲುಗಳಿಂದ ಹಾಗು ಗಾರೆಯಿಂದ

ನಿರ್ಮಿಸಲಾಗಿದೆ. ಇದು ನೆಲಮಟ್ಟದಿಂದ ೧೪ ಅಡಿಗಳಷ್ಟು ಎತ್ತರವಾಗಿದ್ದು, ಗೋಡೆಯ ಮದ್ಯ ಭಾಗದಲ್ಲಿ ಬಾಗಿಲನ್ನು ಇಡಲಾಗಿದೆ. ಬಾಗಿಲಿನ ಅಂತರ ನೆಲಮಟ್ಟದಿಂದ ೨ ಅಡಿ ಎತ್ತರದಲ್ಲಿ ಕಂಡು ಬಂದಿದ್ದು, ಇದರ ಅಗಲ ೩ ಅಡಿ ಉದ್ದ ೩ ಅಡಿ ಅಗಲ ಹೊಂದಿದ್ದು ಚಿಕ್ಕ ಕಿಂಡಿಯಂತೆ ಇದರ ಬಾಗಿಲು ನಿರ್ಮಾಣವಾಗಿದೆ. ಈ ಬಾಗಿಲನ್ನು ಪ್ರವೇಶಿಸಲು ಗೋಡೆಯಲ್ಲಿ ಅಲ್ಲಲ್ಲಿ ಕಲ್ಲಿನ ಮೆಟ್ಟಿಲುಗಳನ್ನು ಇಡಲಾಗಿದೆ. ಬಾಗಿಲ ಒಳಗಿನಿಂದ ವೀಕ್ಷಿಸಿದಾಗ ೧೦ ಅಡಿ ಆಳವಾಗಿದ್ದು, ಕಂದರದಂತೆ ಕಂಡು ಬರುತ್ತದೆ. ಇದರ ಒಳಭಾಗದ ಆಕಾರವು ಚೌಕಾಕಾರದಲ್ಲಿದ್ದು, ಒಳಭಾಗದಲ್ಲಿ ೪ ಕಂಬಗಳ ಸಹಾಯದಿಂದ ಛಾವಣಿಯನ್ನು ಹೊತ್ತು ಕಂಬಗಳು ನಿಂತಿವೆ. ಪ್ರತಿ ಕಂಬಗಳು ೧೫ ಅಡಿ ಎತ್ತರವನ್ನು ಒಳಗೊಂಡಿದ್ದು ಚೌಕಾಕಾರದಲ್ಲಿರುತ್ತವೆ. ಇದರ ಒಳಭಾಗದಲ್ಲಿ ಗಾರೆಯಿಂದ ಸಂದಿಗಳನ್ನು ಮುಚ್ಚಲಾಗಿದೆ. ತುಪ್ಪದ ಕಣಜದ ಮೇಲ್ಛಾವಣಿಯನ್ನು ಗಾರೆಯನ್ನು ಬಳಸಿ ಕಟ್ಟಲಾಗಿದ್ದು ಬಂಡೆಗಳ ಸಂದಿಗಳನ್ನು ಮುಚ್ಚಲಾಗಿದೆ. ಇದಕ್ಕೆ ಯಾವುದೇ ರೀತಿಯ ಬೆಳಕಿನ ಕಿಂಡಿಯನ್ನು ನಿರ್ಮಿಸಲಾಗಿಲ್ಲ.

**೫.೩ ಮದ್ದಿನ ಮನೆ**

ಕೋಟೆಯ ಒಳಭಾಗದಲ್ಲಿ ಮದ್ದು ಗುಂಡು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿಡುವ ಸ್ಥಳಕ್ಕೆ ಮದ್ದಿನ ಮನೆ ಅಥವಾ ಆಯುಧ ಶಾಲೆ, ಆಯುಧಗಾರ, ಎಂದು ಸಹಾ ಕರೆಯಲಾಗುತ್ತದೆ. ದುರ್ಗದ ಸಂಪತ್ತುಗಳಲ್ಲಿ ಶಸ್ತ್ರಾಸ್ತ್ರಗಳು ಒಂದು ಬಗೆಯ ಸಂಪತ್ತಾಗಿರುತ್ತದೆಂದು ನೀತಿ ವಾಕ್ಯಮೃತದಲ್ಲಿ ಹೇಳಲಾಗಿದೆ.[೯] ಕೋಟೆಯ ಭದ್ರವಾದ ಸ್ಥಳದಲ್ಲಿ ಮದ್ದು ಗುಂಡುಗಳನ್ನು ರಕ್ಷಿಸುವುದಕ್ಕಾಗಿ ಮದ್ದಿನ ಮನೆಗಳನ್ನು ನಿರ್ಮಿಸುತ್ತಿದ್ದರು. ಚನ್ನರಾಯನದುರ್ಗ ಕೋಟೆಯಲ್ಲಿ ಮದ್ದಿನ ಮನೆ ನಿರ್ಮಿಸಲಾಗಿದ್ದು ಇದನ್ನು ನೆಲಮಾಳಿಗೆ ಎಂದು ಸ್ಥಳೀಯರು ಕರೆಯುತ್ತಾರೆ.

ಮದ್ದಿನ ಮನೆಯು ೩ ನೇ ಪ್ರವೇಶದ್ವಾರದ ಅರಮನೆ ಕೋಟೆಯ ಒಳಭಾಗದಲ್ಲಿ ಕಂಡು ಬರುತ್ತದೆ. ಇದರ ಪಕ್ಕದಲ್ಲಿ ಬಂಧಿಖಾನೆಯನ್ನು ಕಾಣಬಹುದು. ಮದ್ದಿನ ಮನೆಯನ್ನು ಸಣ್ಣ ಗಾತ್ರದ ಮತ್ತು ಮಣ್ಣನ್ನು ಉಪಯೋಗಿಸಿ ಕಟ್ಟಲಾಗಿದೆ. ಇದರ ಉದ್ದ ೧೨ ಅಡಿ, ಎತ್ತರ. ೧೮ ಅಡಿ ಅಗಲವನ್ನು ಹೊಂದಿದ್ದು ಮೇಲ್ಛಾವಣಿಯು ದೊಡ್ಡಗಾತ್ರದ ಬಂಡೆಗಳಿಂದ ಮುಚ್ಚಲಾಗಿದೆ. ಅದರ ಮೇಲೆ ಗಾರೆಯನ್ನು ಹಾಕಿದ್ದು ಬೆಳಕಿನ ವ್ಯವಸ್ಥೆಗೆ ಮೇಲ್ಭಾಗದಲ್ಲಿ ಸಣ್ಣದಾದ ಕಿಂಡಿಯನ್ನು ಬಿಡಲಾಗಿದೆ. ಇದರ ಒಳ ಪ್ರವೇಶಿಸಲು ಸಾಮಾನ್ಯರಿಂದ ಸಾಧ್ಯವಿಲ್ಲ. ಕಾರಣ ಇದರ ಬಾಗಿಲು ಗೋಡೆಯ ಮಧ್ಯಭಾಗದಲ್ಲಿ ಅಂದರೆ ೬ ಅಡಿ ಎತ್ತರದಲ್ಲಿ ಇಡಲಾಗಿದ್ದು, ಅಲ್ಲಲ್ಲಿ ಮೆಟ್ಟಿಲುಗಳ ರೂಪದಲ್ಲಿ ಗೋಡೆಯಿಂದ ಹೊರ ಚಾಚಿದ ಕಲ್ಲುಗಳನ್ನು ಇಡಲಾಗಿದೆ. ಇದರ ಬಾಗಿಲ ವಿಸ್ತೀರ್ಣ ೩ ಅಡಿ ಅಗಲ ೩ ಅಡಿ ಉದ್ದ ಹೊಂದಿದ್ದು ಒಬ್ಬ ವ್ಯಕ್ತಿ ಒಳಹೋಗಿ ಬರುವಷ್ಟು ಮಾತ್ರ ಜಾಗವಿದೆ. ಛಾವಣಿಯನ್ನು ಹೊತ್ತು ನಿಂತ ೬ ಕಂಬಗಳು ಕೋಣೆಯ ಒಳಗೆ ಕಂಡು ಬರುತ್ತವೆ. ಗೋಡೆಯು ತೇವಾಂಶ ಹೊಂದಿದ ರೀತಿಯಲ್ಲಿ ಕಟ್ಟಲಾಗಿದೆ.

## ೫.೪ ಗರಡಿ ಮನೆ

ಗರಡಿ ಮನೆಯನ್ನು ಎಲ್ಲಾ ಕೋಟೆಗಳಲ್ಲಿಯೂ ನಿರ್ಮಿಸಲಾಗಿರುತ್ತದೆ. ಇದರ ಉದ್ದೇಶವೆಂದರೆ ತಮ್ಮ ಸೈನಿಕರು ದೇಹದಾಢ್ಯತೆಯನ್ನು ಹೊಂದಿ ಶತ್ರುಗಳನ್ನು ಹಿಮ್ಮೆಟ್ಟಿಸುವ ಸಲುವಾಗಿ ಸಾಹಸ ಕ್ರೀಡೆಗಳನ್ನು ಕಲಿಯುವ ಸಲುವಾಗಿ , ಇದನ್ನು ನಿರ್ಮಿಸುತ್ತಿದ್ದರು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಕೂಡ ಕೋಟೆಯು ಎಷ್ಟು ಮುಖ್ಯವೋ ಅದೇ ರೀತಿ ಸೈನ್ಯವು ಅಷ್ಟೇ ಮುಖ್ಯ ಎಂದೇಳಿದ್ದಾನೆ. ಗರಡಿ ಮನೆಯು ತಮ್ಮ ಸೈನಿಕರಿಗೆ ವಿವಿಧ ವಿದ್ಯೆಗಳನ್ನು ಕಲಿಸುವ ಶಾಲೆ ಎಂದರೆ ತಪ್ಪಾಗಲಾರದು. ಇದರಲ್ಲಿ ಶಸ್ತ್ರಗಳ ಪ್ರಯೋಗ, ಸಾಹಸ ಕ್ರೀಡೆಗಳು ಮುಂತಾದವುಗಳನ್ನು ತರಬೇತಿಯನ್ನು ನೀಡಲಾಗುತ್ತದೆ. ತಮ್ಮ ಸೈನಿಕರ ದೇಹಗಳನ್ನು ದೃಡಕಾಯವಾಗಿ ಬೆಳೆಸಲು ಇದೊಂದು ಸಾಹಸಿ ತರಬೇತಿ ಗೃಹ ಎಂದೇಳಬಹುದು. ಇಲ್ಲಿ ಅನೇಕ ವಿಧವಾದ ಗುಂಡುಗಳನ್ನು ಎತ್ತುವ ಸಾಹಸ, ಮಲ್ಲಯುದ್ದ, ಬಿಲ್ವಿದ್ಯೆ , ಕುದುರೆ ಸವಾರಿ ಮುಂತಾದವುಗಳನ್ನು ಕಲಿಸಲಾಗುತ್ತಿತ್ತು. ಇಂತಹ ಗರಡಿ ಮನೆಯನ್ನು ಚನ್ನರಾಯನ ದುರ್ಗದಲ್ಲಿಯೂ ನಿರ್ಮಿಸಲಾಗಿದೆ. ಈ ಗರಡಿಯಲ್ಲಿ ಅಂದಿನ ಪಾಳೆಗಾರರು ಸಾಹಸಮಯ ಕ್ರೀಡೆಗಳಲ್ಲಿ ತೊಡಗುತ್ತಿದ್ದು ಸ್ಪರ್ಧೆಗಳನ್ನು ಏರ್ಪಡಿಸಿ ಪ್ರೋತ್ಸಾಹ ನೀಡುತ್ತಿದ್ದರು.

ಚನ್ನರಾಯನದುರ್ಗದ ೨ ನೇ ಕೋಟೆಯನ್ನು ದಾಟಿ ಮೆಟ್ಟಿಲುಗಳನ್ನು ಏರಿದರೆ ಗರಡಿ ಮನೆ ಕಂಡು ಬರುತ್ತದೆ. ಇದು ಚೌಕಾಕಾರದಲ್ಲಿದ್ದು ಒಳಭಾಗವನ್ನು ಮಣ್ಣು ಮತ್ತು ಇಟ್ಟಿಗೆಯಿಂದ ನಿರ್ಮಿಸಲಾಗಿದೆ. ಇದು ಉತ್ತರಕ್ಕೆ ಬಾಗಿಲು ಹೊಂದಿದ್ದು , ೩ ಅಡಿ ಅಗಲ ೪ ಅಡಿ ಎತ್ತರವನ್ನು ಒಳಗೊಂಡಿದೆ. ಗರಡಿ ಮನೆಯ ಸುತ್ತಳತೆಯು ೭ ಚದುರ ಅಡಿ ಅಗಲ ಹೊಂದಿದೆ.ಒಳ ಪ್ರವೇಶಿಸಿದರೆ ಯಾವುದೇ ರೀತಿಯ ಆಯುಧಗಳು ಕಂಡು ಬರುವುದಿಲ್ಲ. ಭೂ ಮಟ್ಟದಿಂದ ೬ ಅಡಿ ಎತ್ತರದಲ್ಲಿದೆ. ಛಾವಣಿಯನ್ನೊತ್ತ ೨ ಕಂಬಗಳು ಯಾವುದೇ ಕೆತ್ತನೆಗೆ ಒಳಗಾಗದೆ ಚೌಕಾಕಾರದಲ್ಲಿ ಇವೆ. ಇದರ ಒಳಭಾಗದಲ್ಲಿ ಹೆಚ್ಚು ಉಷ್ಣತೆ ಕಂಡು ಬರುತ್ತದೆ. ಬಿತ್ತಿಯಲ್ಲಿ ಯಾವುದೇ ಜಲಾಂದ್ರ ಅಳವಡಿಸಿಲ್ಲ. ಛಾವಣಿಯನ್ನು ಮಧ್ಯಮ ಗಾತ್ರದ ಬಂಡೆಗಳಿಂದ ಮುಚ್ಚಲಾಗಿದ್ದು ಗಾರೆಯನ್ನು ಬಂಡೆಗಳ ಸಂದಿಗೆ ಹಾಕಲಾಗಿದೆ.

### ಬಂಧಿಖಾನೆ

ಹೆಸರೇ ಸೂಚಿಸುವಂತೆ ಯಾವುದೇ ಒಂದು ಅಪರಾಧಕ್ಕೆ ಒಳಗಾದ ವ್ಯಕ್ತಿಯನ್ನು ಅಥವಾ ಕೋಟೆಯನ್ನು ಆಕ್ರಮಿಸಲು ಬಂದ ಶತ್ರುಗಳನ್ನು ಕೂಡಿಹಾಕಿ ಅಥವಾ ಅವರನ್ನು ಬಂಧಿಸಿ ಇಡಲಾಗುತ್ತಿದ್ದ ಕೋಣೆಗೆ ಬಂಧಿಖಾನೆ ಎಂದು ಕರೆಯುತ್ತಿದ್ದರು. ರಾಜನಿಗೆ ಹಾಗೂ ನ್ಯಾಯಕ್ಕೆ ವಿರುದ್ಧವಾಗಿ ವರ್ತಿಸಿದವರನ್ನು ಬಂದಿಖಾನೆಗೆ ಹಾಕಿ ಶಿಕ್ಷೆ ನೀಡಲಾಗುತ್ತಿತ್ತು. ಅಂದಿನ ಶಿಕ್ಷೆಗಳು ಬಹಳ ಕಠಿಣವಾಗಿದ್ದವು. ಅದರ ಸಲುವಾಗಿ ಅಪರಾಧಿಗಳನ್ನು ಅಂದಿನ ಪ್ರತಿಯೊಂದು ಕೋಟೆಯಲ್ಲಿಯೂ ಬಂಧಿಖಾನೆಯನ್ನು

ನಿರ್ಮಿಸಲಾಗಿದೆ. ಇದು ಮದ್ದಿನ ಮನೆಯ ಪಕ್ಕದಲ್ಲಿದ್ದು ೧೫ ಅಡಿ ಉದ್ದ, ೮ ಅಡಿ ಅಗಲ ಹೊಂದಿದ್ದು ಇದರ ಗೋಡೆಯ ನಿರ್ಮಾಣದಲ್ಲಿ ಮದ್ಯಮ ಗಾತ್ರದ ಕಲ್ಲನ್ನು ಬಳಸಲಾಗಿದೆ. ಇದರ ಛಾವಣಿ ಶಿಥಿಲವಾಗಿದ್ದು ೫ ಕಂಬಗಳನ್ನು ಛಾವಣಿಯ ಮೇಲೆ ಹಾಕಲಾಗಿದೆ. ಕೆಳಭಾಗದಲ್ಲಿ ೫ ಕಂಬಗಳು ಛಾವಣಿಯ ಮೇಲೆ ಹಾಕಲಾಗಿದೆ. ಕಂಬಗಳು ಹೊತ್ತು ನಿಂತಿದ್ದು ಯಾವುದೇ ಕೆತ್ತನೆಯನ್ನು ಒಳಗೊಂಡಿಲ್ಲ. ಇದರ ಮುಂಭಾಗದಲ್ಲಿ ಕಾವಲು ಗೋಪುರಗಳಿದ್ದು ಬಂಧಿತರು ತಪ್ಪಿಸಿಕೊಳ್ಳಲು ಸಾಧ್ಯವಾಗದಂತೆ ಈ ಗೋಪುರಗಳನ್ನು ನಿರ್ಮಿಸಲಾಗಿದೆ. ಈ ಕೋಟೆಯ ಬಂಧಿಖಾನೆಗೆ ತನ್ನದೇ ಆದ ಮಹತ್ವವಿದೆ. ಹೈದರಾಲಿಯ ಕಾಲದಲ್ಲಿ ಮಧುಗಿರಿ ಸೈನಿಕರನ್ನು ಈ ಬಂಧಿಖಾನೆಯಲ್ಲಿ ೯ ತಿಂಗಳ ಕಾಲ ಬಂಧಿಸಿ ಸೆರೆ ಹಿಡಿದು ಹಾಕಲಾಯಿತು. ನಂತರದಲ್ಲಿ ಮಧುಗಿರಿ ಕೋಟೆಗೆ ಶತೃಗಳನ್ನು ವರ್ಗಾಯಿಸಲಾಯಿತು.

### ಈಶ್ವರ ದೊಣೆ ಎದುರಿನ ತೆರೆದ ಮಂಟಪ

ಈ ಮಂಟಪವು ಈಶ್ವರ ದೇವಾಲಯದ ಪೂರ್ವಕ್ಕೆ ಕಂಡು ಬರುತ್ತದೆ. ಇದರ ದಕ್ಷಿಣಕ್ಕೆ ತೆರೆದ ಮಂಟಪವಾಗಿದೆ. ನಿದಿಗಳ್ಳರು ಇದನ್ನು ಅಗೆದು ಹಾಳು ಮಾಡಿದ್ದಾರೆ. ಇದರ ರಚನೆಯಲ್ಲಿ ಕಂಡು ಬರುವ ಅಂಶವೆಂದರೆ ಈ ಮಂಟಪವನ್ನು ೪ ಅಡಿ ಎತ್ತರದ ಗೋಡೆಯ ಮೇಲ್ಬಾಗದಲ್ಲಿ ೮ ಕಂಬಗಳನ್ನು ನಿಲ್ಲಿಸುವ ಮೂಲಕ ಸುತ್ತಲೂ ಕಲ್ಲಿನ ಗೋಡೆಯನ್ನು ಕಟ್ಟಲಾಗಿದ್ದು ತೆರೆದ ಮಂಟಪವಾಗಿದೆ. ಇದಕ್ಕೆ ಯಾವುದೇ ರೀತಿಯ ಬಾಗಿಲಿನ ವ್ಯವಸ್ಥೆ ಇರುವುದಿಲ್ಲ. ಕಂಬಗಳು ಆಯತಾಕಾರದಲ್ಲಿದ್ದು ಯಾವುದೇ ಕೆತ್ತನೆಗೆ ಒಳಗಾಗಿಲ್ಲ. ಈ ಕಂಬಗಳು ಬೋದಿಗೆಯನ್ನು ಹೊಂದಿದ್ದು, ಛಾವಣಿಯನ್ನು ಹೊತ್ತು ನಿಂತಿದ್ದು ಯಾವುದೇ ಅಲಂಕಾರ ಕಂಡು ಬಂದಿಲ್ಲ. ಛಾವಣಿಯನ್ನು ಅಗಲವಾದ ಬಂಡೆಗಳ ಸಹಾಯದಿಂದ ಕಟ್ಟಲಾಗಿದೆ. ಇದರ ವಿಸ್ತೀರ್ಣವು ೮ ಅಡಿ ಉದ್ದ ೮ ಅಡಿ ಅಗಲವನ್ನು ಒಳಗೊಂಡಿದ್ದು, ಕಟ್ಟಡವನ್ನೇರಲು ಮೆಟ್ಟಲಿನ ವ್ಯವಸ್ಥೆ ಮಾಡಲಾಗಿದೆ. ಇದನ್ನು ಸಾಮಾನ್ಯವಾಗಿ ಕಾವಲುಗಾರರು ಬಳಸುತ್ತಿದ್ದರೆಂದು ತಿಳಿಯಬಹುದಾಗಿದೆ. ಕಾರಣ ಈ ಮಂಟಪದ ಮುಂಭಾಗದಲ್ಲಿನ ಬತೇರಿಯನ್ನೇರಲು ಮೈಲುಗಳಿರುವುದು ಕಂಡು ಬಂದಿದೆ. ಇದರ ಹಿಂಭಾಗದಲ್ಲಿಯೂ ಕೂಡ ಬತೇರುಗಳನ್ನು ನೋಡಬಹುದಾಗಿದೆ. ಕಾವಲು ಮಂಟಪದ ಯಾವುದೇ ಪ್ರತ್ಯೇಕ ಕೋಣೆಗಳನ್ನು ಒಳಗೊಂಡಿಲ್ಲ.

### ಕೋಟೆ ಹೊರಗೋಡೆಯ ಕಾವಲು ಮಂಟಪ

ಈ ಕಾವಲು ಮಂಟಪವು ದಕ್ಷಿಣ ದ್ವಾರದ ಮುಂಭಾಗದಲ್ಲಿ ನಿರ್ಮಿಸಲಾಗಿದೆ. ಕೋಟೆ ಗೋಡೆಗೆ ಸುಮಾರು ೨೦೦ ಮೀಟರ್ ದೂರದಲ್ಲಿದ್ದು, ತೆರೆದ ಮಂಟಪವಾಗಿರದೇ ಪೂರ್ವದ ಕಡೆ ಮುಖ ಮಾಡಿದ್ದು ದಕ್ಷಿಣ ಉತ್ತರ ಹಾಗೂ ಪಶ್ಚಿಮ ಭಾಗವನ್ನು ಗೋಡೆಯನ್ನು ಕಟ್ಟಲಾಗಿದೆ. ಈ ಮಂಟಪದ ಬಾಗಿಲು ಪೂರ್ವದ ಕಡೆಗೆ ತಿರುಗಿದೆ. ಕಾರಣ ಶತ್ರುಗಳು ಆಕ್ರಮಿಸಲು ಪೂರ್ವದ ಕಡೆಯಿಂದ ಮಾತ್ರ

ಸಾಧ್ಯವಾದರಿಂದ ಇಲ್ಲಿ ಕಾವಲು ಮಂಟಪ ನಿರ್ಮಿಸಲಾಗಿದೆ. ಇದು ನಾಲ್ಕು ಕಂಬಗಳಿಂದ ಕೂಡಿದ್ದು ಮಣ್ಣು ಮತ್ತು ಸಾಧಾರಣ ಗಾತ್ರದ ಕಲ್ಲನ್ನು ಬಳಸಲಾಗಿದೆ. ಕಂಬಗಳು ಕೆತ್ತನೆಗೆ ಒಳಪಡದೆ ಸಾಧಾರಣವಾಗಿದ್ದು ಶಿಥಿಲಾವಸ್ಥೆಯಲ್ಲಿ ಕಂಡು ಬರುತ್ತದೆ. ಇದರ ಮುಂಭಾಗದಲ್ಲಿಯೇ ಕಾವಲು ಗೋಪುರವನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಈ ಕೋಟೆಯ ಸುತ್ತಲೂ ಕಾವಲು ಗೋಪುರಗಳನ್ನು ನಿರ್ಮಿಸಿ ಕೋಟೆಯ ರಕ್ಷಣೆಗೆ ಪ್ರಾಮುಖ್ಯತೆಯನ್ನು ನೀಡಿದ್ದರೆಂದು ತಿಳಿದು ಬರುತ್ತದೆ.

### ೫.೫ ಅರಮನೆಯ ಕಟ್ಟಡಗಳು

ಸಾಮಾನ್ಯವಾಗಿ ಕೋಟೆಯ ನಿರ್ಮಾಣದಲ್ಲಿ ಅರಮನೆಗಳ ಪಾತ್ರ ವಿಶೇಷವಾಗಿರುತ್ತದೆ. ಕಾರಣ ಇದರಲ್ಲಿ ರಾಜ ಹಾಗು ಆತನ ಕುಟುಂಬ ವಾಸಿಸುವುದರಿಂದ ಅವರಿಗೆ ರಕ್ಷಣೆ ಮುಖ್ಯವಾಗಿರುತ್ತದೆ. ಆದ ಕಾರಣ ಅರಮನೆ ಕಟ್ಟಡಕ್ಕೆ ವಿಶೇಷ ಮಹತ್ವ ನೀಡಿ ಉತ್ತಮ ಆಯಾಕಟ್ಟಿನ ಜಾಗದಲ್ಲಿ ನಿರ್ಮಿಸಲಾಗಿರುತ್ತದೆ. ಅಂದರೆ ಅರಮನೆಯ ಸುತ್ತಲು ಭದ್ರವಾದ ಕೋಟೆಯನ್ನು ನಿರ್ಮಿಸಿ ರಾಜನಿಗೆ ಮತ್ತು ಅವನ ಕುಟುಂಬದವರಿಗೆ ಬೇಕಾದ ಎಲ್ಲಾ ಸೌಲಭ್ಯಗಳನ್ನು ಅಲ್ಲಿ ಕಲ್ಪಿಸಲಾಗಿರುತ್ತದೆ. ಅದೇ ರೀತಿಯಾಗಿ ಚನ್ನರಾಯನದುರ್ಗದ ಕೋಟೆಯಲ್ಲಿಯೂ ಸಹ ಅರಮನೆಗೆ ಉತ್ತಮ ರೀತಿಯಲ್ಲಿ ರಕ್ಷಣೆ ನೀಡಲಾಗಿದೆ.

ಕೋಟೆಯ ಅರಮನೆಯನ್ನು ಪ್ರವೇಶಿಸಲು ೨ ಮುಖ್ಯ ದ್ವಾರಗಳಿವೆ. ಮೊದಲ ದ್ವಾರವು ತನ್ನ ಕುಲದೇವರಾದ ಚನ್ನ ಕೇಶವ ದೇವಾಲಯದ ಪೂರ್ವಕ್ಕೆ ಮುಖ ಮಾಡಿದ ಮುಖ್ಯ ಬಾಗಿಲು ಹಾಗು ಚನ್ನ ಕೇಶವ ದೇವಾಲಯದ ಉತ್ತರಕ್ಕಿರುವ ಬಾಗಿಲು ಈ ಬಾಗಿಲು ದಕ್ಷಿಣದ ಕಡೆ ತೆರೆದಿದೆ. ಇದರ ಮೂಲಕ ಒಳ ಪ್ರವೇಶಿಸಿದರೆ, ಅರಮನೆ ಕಂಡು ಬರುತ್ತದೆ. ಇದರ ಎಡಭಾಗಕ್ಕೆ ಕಾವಲು ಗೋಪುರವಿದ್ದು, ಸೈನಿಕರ ಕಾವಲು ಮಂಟಪವು ಕಂಡು ಬರುತ್ತದೆ. ಇದನು ಪೂರ್ಣವಾಗಿ ಕಲ್ಲು ಹಾಗು ಗಾರೆಯಿಂದ ನಿರ್ಮಿಸಲಾಗಿದೆ. ಈ ಮಂಪಟವು ೪ ಕಂಬಗಳನ್ನು ಒಳಗೊಂಡಿದ್ದು, ಸಾಧಾರಣ ಕೆತ್ತನೆಯಿಂದ ಕೂಡಿದೆ.

ಅರಮನೆಯ ಮುಖ್ಯದ್ವಾರವು ಪೂರ್ವ ದಿಕ್ಕಿನ ಕಡೆ ಇದ್ದು ಮಣ್ಣು ಮತ್ತು ಕಲ್ಲಿನ ಸಹಾಯದಿಂದ ಕಟ್ಟಲಾಗಿದೆ. ದಕ್ಷಿಣ ಭಾಗದಿಂದ ಪ್ರವೇಶಿಸಿದರೆ ಎಡ ಮತ್ತು ಬಲಭಾಗದಲ್ಲಿ ವಿಶಾಲವಾದ ಜಗತಿಗಳನ್ನು ಒಳಗೊಂಡಿದೆ. ಜಗತಿಯ ಕಂಬಗಳು ಬಿದ್ದು ಶಿಥಿಲವಾಗಿದೆ. ಈ ಕಂಬಗಳ ಕೆತ್ತನೆ ಇತರೆ ಕಟ್ಟಡಗಳಿಗೆ ಹೋಲಿಕೆ ಮಾಡಿದರೆ ನಯವಾದ ಕೆತ್ತನೆ ಒಳಗೊಂಡಿದ್ದು ಚೌಕಾಕಾರದಲ್ಲಿದೆ. ಜಗತಿಯ ನಂತರ ಒಳ ಪ್ರವೇಶಿಸಿದರೆ ವಿಶಾಲವಾದ ಆವರಣವನ್ನು ಒಳಗೊಂಡಿದೆ. ಈ ಆವರಣದ ಸುತ್ತಲು ಜಗತಿ ನಿರ್ಮಿಸಲಾಗಿದ್ದು ಜಗತಿಯ ಕಲ್ಲುಗಳು ಕೆತ್ತನೆಯಿಂದ ಕೂಡಿದ್ದು ನಯವಾಗಿದೆ. ಯಾವುದೇ ಶಿಲ್ಪಗಳ ರಚನೆ ಹೊಂದಿಲ್ಲ. ಈ ಜಗತಿಯು ಇಂಗ್ಲೀಷ್‌ನ ಯು ಆಕಾರದ ಮಾದರಿಯಲ್ಲಿದೆ. ಜಗತಿಯ ಮೇಲೆ

ಕುಳಿತುಕೊಳ್ಳಲು ವಿಶಾಲವಾಗಿದೆ. ಕೋಣೆಯ ಮುಂದಿನ ಭಾಗದಲ್ಲಿ ೪ ಕೋಣೆಗಳು ಪ್ರತ್ಯೇಕವಾಗಿವೆ. ಈ ಕೋಣೆಗಳು ತಲಾ ೮ ಚದುರ ಅಡಿ ವಿಸ್ತೀರ್ಣ ಹೊಂದಿವೆ. ಈ ಕೋಣೆಗಳು ಸಾಮಾನ್ಯವಾಗಿ ಇವು ಅಡುಗೆ ಮನೆ, ಹಾಗು ಎರಡು ಪ್ರತ್ಯೇಕ ಕೋಣೆಗಳಾಗಿರಬಹುದು. ಅಡುಗೆ ಕೋಣೆ ಎಂದು ಗುರ್ತಿಸಲು ಅಲ್ಲಿ ಒಳಕಲ್ಲು ಹಾಗು ಬೂದಿಯ ಅವಶೇಷಗಳನ್ನು ಕಾಣಬಹುದಾಗಿದೆ. ಈ ಕಟ್ಟಡಗಳನ್ನು ಸಣ್ಣ ಗಾತ್ರದ ಕಲ್ಲುಗಳಿಂದ ನಿರ್ಮಿಸಲಾಗಿದ್ದು, ಗೋಡೆಗಳ ಎತ್ತರ ೯ ಅಡಿ ಎತ್ತರ ಒಳಗೊಂಡಿದೆ. ನಾಲ್ಕು ಕೋಣೆಗಳು ಸಾಲಾಗಿದ್ದು ಎಡ ಮತ್ತು ಬಲಭಾಗಗಳಿಗೆ ಸಮನಾಗಿ ೨ ಕೊಠಡಿ ರಚಿಸಲಾಗಿದೆ. ಎಡಭಾಗದ ಮೊದಲ ಕೋಣೆ ಅಡುಗೆ ಮನೆಯಾಗಿದೆ. ಮೂರನೇ ಕೊಠಡಿಯ ಮುಖಾಂತರ ಹೊರ ನಡೆದರೆ ೮ ಅಡಿ ಎತ್ತರ ೨ ಕಟ್ಟಡದ ಅವಶೇಷಗಳು ದೊರೆಯುತ್ತವೆ. ಸಾಮಾನ್ಯವಾಗಿ ಇವು ಕಾವಲುಗಾರರ ಮನೆಗಳಿರಬೇಕು ಎಂದು ಊಹಿಸಲಾಗಿದೆ. ಕಾರಣ ಇದರ ಮುಂಭಾಗದಲ್ಲಿ ಬತೇರಿ ಕಂಡು ಬಂದಿದ್ದು ಈ ಕೊಠಡಿಗಳನ್ನು ಅರಮನೆಗೆ ಹೋಲಿಸಿದರೆ ಭಿನ್ನವಾಗಿದ್ದು ಕಾವಲುಗಾರರ ಮನೆಗಳಾಗಿವೆ.

**ಅರಮನೆ ಆವರಣದ ಈಜುಕೊಳ**

ಈಜು ಕೊಳವನ್ನು ರಾಜನ ಕುಟುಂಬದವರು ಬಳಸುತ್ತಿದ್ದಾರೆಂದು ಕಂಡು ಬರುತ್ತದೆ. ಕಾರಣ ಅರಮನೆಯ ದಕ್ಷಿಣ ಭಾಗದ ಬಾಗಿಲ ಮುಂಭಾಗದಲ್ಲಿ ಈಜುಕೊಳ ಬರುತ್ತದೆ. ಇದರ ವಿಸ್ತೀರ್ಣವು ಪೂರ್ವ ಪಶ್ಚಿಮವಾಗಿ ೭ ಅಡಿ ಉದ್ದ ಉತ್ತರ ದಕ್ಷಿಣವಾಗಿ ೫ ಅಡಿ ಅಗಲ ಹಾಗು ೬ ಅಡಿ ಆಳವನ್ನು ಕಾಣಬಹುದು. ಇದರ ನಿರ್ಮಾಣ ಕಾರ್ಯದಲ್ಲಿ ಗಾರೆ ಇಟ್ಟಿಗೆಯನ್ನು ಬಳಸಲಾಗಿದೆ. ಇದರ ಒಳಗೆ ಇಳಿಯಲು ಮೆಟ್ಟಿಲುಗಳ ವ್ಯವಸ್ಥೆಯನ್ನು ಮಾಡಲಾಗಿದ್ದು, ಈ ಮೆಟ್ಟಿಲುಗಳು ದಕ್ಷಿಣದ ಕಡೆಯ ಗೋಡೆಗೆ ಇಡಲಾಗಿದೆ. ಅಲ್ಲದೆ ಕೊಳದ ನೀರು ಹೊರ ಹೋಗಲು ಕೊಳವೆ ಮಾಡಲಾಗಿದೆ. ಈಜು ಕೊಳದ ಗೋಡೆಯ ಮಧ್ಯಭಾಗದಲ್ಲಿ ಕಲ್ಲುಗಳನ್ನು ಇಡಲಾಗಿದ್ದು, ಸ್ಪಷ್ಟವಾಗಿ ಇದು ಈಜುಕೊಳವೆಂದು ಗುರ್ತಿಸಬಹುದಾಗಿದೆ. ಪ್ರಾಚೀನ ಕಾಲದಿಂದಲೂ ಈಜುಕೋಳದ ಕಲ್ಪನೆ ಇರುವುದು ನಮಗೆಲ್ಲ ತಿಳಿದ ವಿಷಯ. ಸಿಂಧೂ ನಾಗರೀಕತೆಯಲ್ಲಿ ಸಹ ವ್ಯವಸ್ಥಿತವಾದ ಈಜುಕೊಳವನ್ನು ನಿರ್ಮಿಸಿರುವುದು ನಮಗೆ ತಿಳಿದು ಬರುತ್ತದೆ.[೧೦] ಚನ್ನರಾಯನದುರ್ಗದಲ್ಲಿ ಸ್ವಾಭಾವಿಕ ನೀರನ್ನು ತಡೆ ಹಾಕಿದ್ದು ನಿರ್ಮಿಸಿದರೂ ಕೂಡ ನೀರು ಹೊರ ಹೋಗುವ ವ್ಯವಸ್ಥೆ ಮಾಡಲಾಗಿದೆ.

**ಅರಮನೆ ಆವರಣದ ಮೇಲ್ಭಾಗದ ದೊಣೆ**

ಅರಮನೆ ನಿರ್ಮಾಣದ ಮೇಲ್ಭಾಗದ ಕೋಟೆಯಲ್ಲಿ ಬಿದ್ದ ನೀರನ್ನು ಸಂಗ್ರಹಿಸಲು ಸ್ವಾಭಾವಿಕವಾಗಿ ೫ ಅಡಿ ಆಳವಿದ್ದು, ಅದರ ಮೇಲ್ಭಾಗಕ್ಕೆ ೬ ಅಡಿ ಎತ್ತರದಲ್ಲಿ ಗಾರೆ ಮತ್ತು ಇಟ್ಟಿಗೆಯನ್ನು ಬಳಸಿ

ಗೋಡೆಯನ್ನು ನಿರ್ಮಿಸಲಾಗಿದೆ. ಈ ದೊಣೆಯು ೧೧ ಅಡಿ ಆಳವನ್ನು ಒಳಗೊಂಡಿದ್ದು ಬೆಟ್ಟದ ಮೇಲೆ ಬಿದ್ದ ನೀರನ್ನು ಇದು ಸಂಗ್ರಹವಾಗುತ್ತಿತ್ತು. ನೀರು ಅರಮನೆಯ ಎಲ್ಲಾ ಕೆಲಸ ಕಾರ್ಯಗಳಿಗೆ ಬಳಸಲಾಗುತ್ತಿತ್ತು. ಈ ನೀರನ್ನು ಹೊರ ಹೋಗುವ ವ್ಯವಸ್ಥೆ ಕಲ್ಪಿಸಲಾಗಿದೆ. ಮೇಲ್ಭಾಗದ ಕಟ್ಟಡ ಇಂಗ್ಲೀಷ್‌ನ ಎಸ್ ಅಕ್ಷರದ ಮಾದರಿಯಲ್ಲಿ ನಿರ್ಮಿಸಲಾಗಿದೆ. ಇದು ಅರಮನೆಗೆ ನೀರೊದಗಿಸುವ ಪ್ರಮುಖ ದೊಣೆಯಾಗಿದೆ.

### ಶೌಚಾಲಯ

ಇದು ಕೋಟೆಯ ಕೊನೆಯ ಭಾಗದಲ್ಲಿ ರಚನೆಯಾಗದ ಸ್ಮಾರಕವಾಗಿದೆ. ಈ ಕೋಟೆಯನ್ನು ಕೊಮ್ಮಾರಯ್ಯನೆಂಬವನು ವಶಪಡಿಸಿಕೊಂಡು ೯ ಉದ್ದ ಹಾಗು ೧ ೧/೨ ಅಗಲವನ್ನು ಹೊಂದಿದ ಸುಟ್ಟ ಇಟ್ಟಿಗೆಯಿಂದ ಹಾಗು ಗಾರೆಯಿಂದ ನಿರ್ಮಿಸಿದ್ದಾನೆ. ಕೋಟೆ ಗೋಡೆಗೆ ದೊಡ್ಡ ಗಾತ್ರದ ಕಲ್ಲುಗಳನ್ನು ಬಳಸಲಾಗಿದೆ. ಒಳಭಾಗದಲ್ಲಿ ಇಟ್ಟಿಗೆಯಿಂದ ನಿರ್ಮಿಸಿದ ಬಂದೂಕಿನ ಕಿಂಡಿ ಹೆಚ್ಚು ಕಂಡು ಬರುತ್ತವೆ. ಈ ಕೋಟೆಯ ದಕ್ಷಿಣದ ಭಾಗದಲ್ಲಿ ಶೌಚಾಲಯವನ್ನು ನಿರ್ಮಿಸಲಾಗಿದೆ. ೩ ಅಡಿ ಉದ್ದ ೩ ಅಡಿ ಅಗಲ ಹೊಂದಿದ ಗೋಡೆಯನ್ನು ನಿರ್ಮಿಸಲಾಗಿದ್ದು ಕೆಳಭಾಗದಲ್ಲಿ ಯಾವುದೇ ರೀತಿಯ ಶೌಚಾಲಯದ ಗುಂಡಿ ತೆಗೆದಿಲ್ಲ ಕೆಳಭಾಗದಲ್ಲಿ ಕಲ್ಲು ಗಾರೆ ಹಾಕಿ ರಂಧ್ರವನ್ನು ಮಾಡಲಾಗಿದೆ. ಅಂದಿನ ಕಾಲದಲ್ಲಿಯೇ ಶೌಚಾಲಯದ ವ್ಯವಸ್ಥೆಯನ್ನು ಬಳಸಲಾಗುತ್ತಿತ್ತೆಂದು ತಿಳಿಯಬಹುದಾಗಿದೆ.

### ಎಮ್ಮೆ ಮುಸುರೆ ದೊಣೆ

ಮುಸುರೆ ದೊಣೆಯು ಉಪ್ಪಿನ ಕಣಜದ ಪಶ್ಚಿಮಕ್ಕೂ ಹಾಗು ಕೇಶವ ದೇವಾಲಯದ ಉತ್ತರಕ್ಕೆ ಕಂಡು ಬರುತ್ತದೆ. ಇದು ಗಾರೆಯಿಂದ ಮಾಡಲ್ಪಟ್ಟಿದ್ದು ೧ ಅಡಿ ದಪ್ಪ ೫ ಅಡಿ ಆಳ , ೬ ಅಡಿ ಅಗಲ ಹೊಂದಿದೆ. ಇದರ ಒಳಗೆ ಆಹಾರವಸ್ತುಗಳನ್ನು ಹಾಕಲಾಗುತ್ತಿತ್ತು. ಕೋಟೆಯ ಒಳಗಡೆ ಸಾಮಾನ್ಯವಾಗಿ ಗಾರೆಯನ್ನು ರುಬ್ಬಲು ಎಮ್ಮೆಗಳನ್ನು ಬಳಸುತ್ತಿದ್ದರು. ಅವುಗಳಿಗೆ ಉಪ್ಪನ್ನು ಹಾಕಲು ಉಪ್ಪಿನ ಕಣಜವನ್ನು ತಯಾರಿಸಿದ್ದರು. ಎಮ್ಮೆಗಳಿಂದ ಹಾಲು, ಮೊಸರು, ತುಪ್ಪದ ಉಪಯೋಗವನ್ನು ಪಡೆದುಕೊಳ್ಳುತ್ತಿದ್ದರು. ಇದನ್ನು ಇಂದಿಗೂ ಕಾಣಬಹುದಾಗಿದೆ.

### ಪ್ರಮುಖ ಬತೇರಿಗಳು

ಶತ್ರುಗಳ ಸುಳಿವನ್ನು ದೂರದಿಂದಲೇ ವೀಕ್ಷಿಸಲು ಅನುಕೂಲವಾಗುವಂತೆ ನಿರ್ಮಾಣಗೊಂಡ ಕಟ್ಟಡಗಳೇ ಬತೇರುಗಳು ಇವುಗಳ ರಚನೆಯು ವೃತ್ತಾಕಾರದಲ್ಲಿ ಕಂಡು ಬರುತ್ತವೆ.ಇವುಗಳನ್ನು ಹೆಚ್ಚಾಗಿ ಗಿರಿ ದುರ್ಗಗಳಲ್ಲಿ ಕಾಣಬಹುದಾಗಿದೆ. ಸ್ಥಳೀಯವಾಗಿ ಇಂತಹ ಬತೇರುಗಳನ್ನು ಅರಮನೆ ಆವರಣದ ಬತೇರು, ರಣಬತೇರಿ, ಕಹಳೆ ಬತೇರು, ಝುಂಡಾ ಬತೇರು ಎಂಬ ಹೆಸರುಗಳಿಂದ ಕರೆಯುತ್ತಾರೆ.

ಚನ್ನರಾಯನದುರ್ಗ ಕೋಟೆಯಲ್ಲಿ ಇಂತಹ ಬತೇರುಗಳನ್ನು ನಾವು ಕಾಣಬಹುದಾಗಿದೆ. ಇಲ್ಲಿನ ಪ್ರಮುಖ ಬತೇರಿಗಳಲ್ಲಿ ದೊಣೆಯ ಬತೇರಿಯು ಅತ್ಯಂತ ದೊಡ್ಡ ಹಾಗು ವಿಶಾಲವಾದ ಬತೇರಿಯಾಗಿದೆ. ಇದು ವಿಶಾಲವಾದ ಮಾಳಿಗೆಯನ್ನು ಒಳಗೊಂಡಿದೆ. ಇದಕ್ಕೆ ಯಾವುದೇ ಮೆಟ್ಟಿಲುಗಳಿಲ್ಲದೆ ಇಳಿಜಾರಿನ ರೂಪದಲ್ಲಿ ನಿರ್ಮಿಸಲಾಗಿದೆ. ಫಿರಂಗಿಗಳನ್ನು ಎಳೆದು ನಿಲ್ಲಿಸಲು ಸಹಾಯಕವಾಗುವಂತೆ ರಚಿಸಲಾಗಿದೆ. ಇದರ ಸುತ್ತಳತೆ ದಕ್ಷಿಣದಿಂದ ಉತ್ತರಕ್ಕೆ ೨೦ ಅಡಿ ಉದ್ದ ಪೂರ್ವದಿಂದ ಪಶ್ಚಿಮಕ್ಕೆ ೨೬ ಅಡಿ ಉದ್ದ ಒಳಗೊಂಡಿದೆ. ಎತ್ತರದಲ್ಲಿ ೧೮ ಅಡಿ ಒಳಗೊಂಡಿದೆ. ಮೇಲ್ಭಾಗದ ಮಾಳಿಗೆಯನ್ನು ಚಿಕ್ಕ ಕಲ್ಲುಗಳಿಂದ ಹಾಗು ಗಾರೆಯಿಂದ ಸಮದಟ್ಟಾಗಿ ಮಾಡಲಾಗಿದೆ. ಸುತ್ತಲು ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ಕೈಪಿಡಿ ಕಟ್ಟಲಾಗಿದ್ದು ಗುಂಡು ಹಾರಿಸಲು ಕೈಪಿಡಿಯಲ್ಲಿ ಕಿಂಡಿ ಬಿಡಲಾಗಿದೆ.

ಇದರ ಉತ್ತರ ಭಾಗಕ್ಕೆ ಮತ್ತೊಂದು ಬತೇರು ಕಾಣಬಹುದು. ಇದು ಪೂರ್ವದ ಕಡೆಯಿಂದ ಬರುವ ಶತ್ರುಗಳ ವೀಕ್ಷಣೆಗಾಗಿ ನಿರ್ಮಿಸಲಾಗಿದ್ದು ಈ ಬತೇರು ಯಾವ ಹೆಸರಿನಿಂದ ಕರೆಯುತ್ತಿದ್ದಾರೆಂದು ತಿಳಿದು ಬಂದಿಲ್ಲ. ಇದು ವೃತ್ತಾಕಾರದ ರಚನೆಯನ್ನು ಹೊಂದಿದ್ದು ೧೫ ಅಡಿ ಎತ್ತರ ಹೊಂದಿದೆ. ಇದರ ಮೇಲ್ಭಾಗ ವಿಶಾಲವಾಗಿದ್ದು , ಕೈಪಿಡಿಯನ್ನು ಯತಾವತ್ತಾಗಿ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಲಾಗಿದೆ. ಇಲ್ಲಿಯೂ ಸಹಾ ಫಿರಂಗಿಯಿಂದ ಮದ್ದು ಸಿಡಿಸಲು ಕಿಂಡಿ ಬಿಡಲಾಗಿದೆ. ಇದರ ಮೇಲೆ ಅತ್ತಲು ಮೆಟ್ಟಿಲುಗಳನ್ನು ಕಟ್ಟಲಾಗಿದೆ. ಈ ಬತೇರು ಎತ್ತರದಲ್ಲಿ ೨ ನೇ ಸ್ಥಾನ ಪಡೆದಿದೆ. ಬತೇರುಗಳಲ್ಲದೆ ಬೆಟ್ಟದ ಮೇಲೆ ಹಲವು ಬುರುಜುಗಳನ್ನು ಕಾಣಬಹುದು. ಕೋಟೆಯ ಆಯಕಟ್ಟಿನ ಭಾಗದಲ್ಲಿ ಬುರುಜುಗಳು ತುಂಬಾ ಪ್ರಾಮುಖ್ಯತೆ ಪಡೆದುಕೊಂಡಿವೆ. ಕೋಟೆಯ ಪ್ರಕಾರದ ಮೇಲೂ ಗೋಪುರದ ತುದಿಯಲ್ಲೂ ಕಟ್ಟಿರುವ ಮತ್ತೊಂದು ವರ್ತುಲಾಕಾರದ ಕ್ಟಟಡವೇ ಬುರುಜು. ಕೋಟೆಯ ಮೇಲಿನ ಬುರುಜನ್ನು ಕೊತ್ತಲವೆಂದು ಕರ್ನಾಟಕ ವಾಸ್ತು ಶಿಲ್ಪದಲ್ಲಿ ವಿವರಿಸಲಾಗಿದೆ.[೧೧] ಇಂತಹ ಬುರುಜುಗಳು ಇಲ್ಲಿ ಕಾಣಬಹುದಾಗಿದೆ. ಇವುಗಳು ಕೆಳಕೋಟೆಯಿಂದ ಮೇಲಿನ ಕೋಟೆಯವರೆಗೂ ಕಂಡುಬರುತ್ತವೆ. ಇವುಗಳು ಹೆಚ್ಚಾಗಿ ವೃತ್ತಾಕಾರದಲ್ಲಿ ಕಂಡು ಬಂದರೆ ಒಂದು ಚೌಕಾಕಾರದ ಬುರುಜು ಕಂಡು ಬರುತ್ತವೆ. ಇವುಗಳು ಕೆಳಭಾಗದಲ್ಲಿ ದೊಡ್ಡ ಗಾತ್ರದ ಗಾರೆ ಬಳಸಲಾಗಿದೆ. ಮೇಲ್ಭಾಗದಲ್ಲಿ ಇಟ್ಟಿಗೆ ಗಾರೆ ಬಳಸಿ ಕಟ್ಟಿದ್ದಾರೆ. ಇವುಗಳು ೧೦ ಮೀಟರ್‌ನಿಂದ ೧೮ ಮೀಟರ್ ವಿಸ್ತೀರ್ಣವಿರುವ ಬುರುಜುಗಳನ್ನು ಕಾಣಬಹುದಾಗಿದೆ. ಬುರುಜುಗಳನ್ನು ಕೋಟೆಯ ಆಯಾಕಟ್ಟಿನ ಪ್ರದೇಶದಲ್ಲಿ ರಚಿಸಿದ್ದು ಇವುಗಳಿಗೆ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳು ಫಿರಂಗಿ ಇಡಲು ಗೂಡುಗಳು ರಚಿಸಿರುವುದನ್ನು ಕಾಣಬಹುದಾಗಿದೆ. ಹೀಗೆ ಚನ್ನರಾಯನ ದುರ್ಗದ ಕೋಟೆಯಲ್ಲಿ ಕಂಡು ಬರುವ ಪ್ರಮುಖ ಸ್ಮಾರಕಗಳಾದ ನೀರಿನ ಸ್ವಾಭಾವಿಕ ದೊಣೆಗಳು , ಅರಮನೆ ಕಟ್ಟಡಗಳು, ಈಜುಕೊಳ, ಮದ್ದಿನ ಮನೆ, ಬಂದಿಖಾನೆ ಕಾವಲು ಮಂಟಪಗಳಲ್ಲದೆ, ಕೋಟೆಯ ರಚನೆಯಲ್ಲಿ ವೈಶಿಷ್ಟತೆ ಹೊಂದಿದ್ದು ಸುತ್ತ ಮುತ್ತಲ ಕೋಟೆಗಳಿಗಿಂತಲೂ ಭಿನ್ನವೆಂದು ಹೇಳಬಹುದಾಗಿದೆ.

## ಅಡಿ ಟಿಪ್ಪಣಿ

೧) ರಮೇಶ ನಾಯಕ, ೨೦೦೭: ರಕ್ಷಣಾ ವಾಸ್ತುಶಿಲ್ಪ ಮತ್ತು ದೇವಾಲಯ ವಾಸ್ತುಶಿಲ್ಪ, ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ,ಅಧ್ಯಯನಗಳ ಮರು ಚಿಂತನೆ, (ಸಂ) ರಮೇಶ್‌ನಾಯಕ, ಪು. ೮೪

೨) ಪ್ರಭಾಕರ್. ಎಂ.ಎಸ್., ೧೯೯೯ : ದೇವಾಲಯಗಳ ವಾಸ್ತು ಚಂದ್ರಿಕೆ'' ಪು. ೨೭

೩) ರಾಮಚಂದ್ರರಾವ್ ಎಸ್.ಕೆ., ೧೯೯೪:, ಭಾರತದ ದೇವಾಲಯಗಳು, ನೆಲೆ- ಹಿನ್ನೆಲೆ ಪು. ೧

೪) ಅದೇ ಪು.೫

೫) ಜ್ಞಾನಾನಂದ ಜಿ., ೨೦೦೨ : ಶಿಲ್ಪ ದರ್ಶನ ಸಂಪುಟ- ೨, ಪು. ೧೫

೬) ವಾಸುದೇವ ಬಡಿಗೇರ, ಕರ್ನಾಟಕ ದೇವಾಲಯಗಳ ಕೋಶ., ಬಿಜಾಪುರ ಜಿಲ್ಲೆ ,ಪು. - ೨

೭) ಅದೇ ಪು.೩

೮) ದೀಕ್ಷಿತ್ ಜಿ.ಎಸ್., ೨೦೦೦ : ಸೋಮದೇವ ವಿರಚಿತ ನೀತಿ ವಾಕ್ಯಾಮೃತ, ಪು. ೨೦೬

೯) ಅದೇ. ಪು.೨೧೦

೧೦) ಅದೇ. ಪು. ೨೧೧

೧೧) ರಮೇಶ್ ಬಿ.ಗು., ೧೯೯೭: ಕರ್ನಾಟಕ ವಾಸ್ತು ಶಿಲ್ಪ , ಪು. ೩೧

# ಅಧ್ಯಾಯ - ಆರು

## ನೀರಿನ ತಾಣಗಳು

ನೀರು ಭೂಮಿಯ ಮೇಲಿನ ಸಕಲ ಜೀವಿಗಳಿಗೆ ಅವಶ್ಯಕವಾಗಿದೆ. ನೀರಿನಿಂದಲೇ ಹಲವು ಜೀವರಾಶಿಗಳು ಉಗಮವಾಗಿವೆ. ಮಾನವನ ಉಗಮವು ಕಾಲದಿಂದ ಕಾಲಕ್ಕೆ ಮಹತ್ವದ ಪಾತ್ರ ನಿರ್ವಹಿಸಿದು, ಪ್ರಾರಂಭದಲ್ಲಿ ಅಲೆಮಾರಿಯಾಗಿದ್ದ ಮಾನವ ಶಿಲೆಗಳಿಂದ ಆಯುಧಗಳನ್ನು ತಯಾರಿಸಿಕೊಂಡು ಬೇಟೆಯಾಡಿ ಜೀವನ ನಡೆಸುತ್ತಿದ್ದನು. ಅವನ ಚಟುವಟಿಕೆಗಳ ಕಾರ್ಯಕ್ಷೇತ್ರ ಸರೋವರ, ಕೆರೆ,ನದಿ, ತೊರೆಗಳ ಸಮೀಪದಲ್ಲಿ ಕೇಂದ್ರೀಕೃತವಾಗಿತ್ತು. ಇದಕ್ಕೆ ಪೂರಕವಾಗಿ ನಡೆಸಿದ ಅನೇಕ ಸಂಶೋಧನೆಗಳು ಸಾಕ್ಷಿಗಳನ್ನು ಒದಗಿಸಿವೆ. ಅಲೆಮಾರಿಯಾಗಿದ್ದ ಮಾನವನು ಒಂದು ಕಡೆ ನಿರಂತರವಾಗಿ ನೆಲೆಸಲು ಪ್ರಾರಂಭಿಸಿ, ತಾನು ಬಳಸುತ್ತಿದ್ದ ಆಯುಧಗಳಲ್ಲಿ ಸುಧಾರಣೆ ಮಾಡಿಕೊಂಡು ಕೃಷಿ ಜೀವನವನ್ನು ಪ್ರಾರಂಭಿಸಿದನು. ಇದಕ್ಕಾಗಿ ಪ್ರಾಣಿಗಳನ್ನು ಸಾಕಲಾರಂಭಿಸಿ ಅವುಗಳ ಸಹಾಯದಿಂದ ವ್ಯವಸಾಯ ಮಾಡಿ ಜೀವನ ನಡೆಸಿ ಸ್ಥಿರವಾಗಿ ನೆಲೆನಿಂತನು .

### ೬.೧ ಕೆರೆ ನೀರಾವರಿಯ ಪ್ರಾಚೀನತೆ

ಮಾನವನು ಕೃಷಿ ಮಾಡಲು ಹೆಚ್ಚು ನೀರು ದೊರೆಯುವ ಸ್ಥಳವನ್ನು ಆಶ್ರಯಿಸಿದನು. ಆದರೆ ಪರಿಸರದಲ್ಲಾಗುವ ಬದಲಾವಣೆಯಿಂದ ಆಗಿಂದಾಗ್ಗೆ ಕಷ್ಟಕ್ಕೆ ಒಳಗಾಗುತ್ತಿದ್ದು. ಇದರಿಂದ ಬೇಸತ್ತು ನೀರು ಸಂಗ್ರಹಿಸುವ ಪ್ರಯತ್ನದಲ್ಲಿ ತೊಡಗಿದನು. ಮಳೆಗಾಲವು ವರ್ಷದ ಕೆಲವು ಮಾಸದಲ್ಲಿ ಮಾತ್ರ ಇದ್ದು, ಬೇರೆ ಸಮಯದಲ್ಲಿ ನೀರಿನ ಅಗತ್ಯತೆಗಾಗಿ ತಂತ್ರ ಬಳಸಿಕೊಂಡನು. ಮಳೆಯ ನೀರು ಸಾಮಾನ್ಯವಾಗಿ ತಗ್ಗಾದ ಪ್ರದೇಶದಲ್ಲಿ ಕೂಡಿಕೊಳ್ಳುತ್ತಿದ್ದು, ಅಂತಹ ಜಾಗವನ್ನು ಆಯ್ಕೆ ಮಾಡಿಕೊಂಡು ಸಣ್ಣ ಕಟ್ಟೆಗಳನ್ನು ನಿರ್ಮಿಸಿದನು. ಈ ನಿಟ್ಟಿನಲ್ಲಿ ವಿಶ್ವದಾದ್ಯಂತ ಅನೇಕ ಸಂಶೋಧನೆಗಳು ನಡೆದು ಕೆಲವು ಪುರಾತತ್ವ ಅನ್ವೇಷಣೆಯಿಂದ ದೊರಕಿರುವ ಮಾಹಿತಿಗಳಲ್ಲಿ ಈಜಿಪ್ಟ್ ದೇಶದಲ್ಲಿ ದೊರೆತಿರುವ ರೇಖಾ ಚಿತ್ರಗಳಲ್ಲಿ ಮಾನವನು ನೀರನ್ನು ಸಂಗ್ರಹಿಸಿ ಬಳಸಿಕೊಂಡಿರುವುದನ್ನು ಚಿತ್ರಿಸಲಾಗಿದೆ. ಇದರಿಂದಾಗಿ ಆ ದೇಶದಲ್ಲಿಯೇ ಮೊದಲ ಬಾರಿ ಕೆರೆ- ನೀರಾವರಿ ಪದ್ದತಿಯನ್ನು ಬಳಕೆಗೆ ತಂದರೆಂದು ಅಭಿಪ್ರಾಯಿಸಲಾಗಿದೆ.[೧] ನಮ್ಮ ಭಾರತ ದೇಶವೂ ಸಹ ಈಜಿಪ್ಟ್‌ನಷ್ಟೆ ಪ್ರಾಚೀನವಾದ ದೇಶ. ಈಜಿಪ್ಟ್‌ಗೆ ಸಮಕಾಲೀನವಾಗಿ ಕೃಷಿ ಜೀವನದ ಕುರುಹುಗಳನ್ನು ನೋಡಬಹುದು. ಆದರೆ ಇಲ್ಲಿ ಇನ್ನು ಪರಿಪೂರ್ಣವಾದ ಅಧ್ಯಯನಗಳು ಆಗದ ಕಾರಣ ಹೇಳಲು ಸಾಧ್ಯವಾಗದಿದ್ದರೂ ಅಲ್ಲಲ್ಲಿ ದೊರೆಯುವ

ಪುರಾವೆಗಳ ಆಧಾರದ ಮೇಲೆ ಆರು ಸಾವಿರ ವರ್ಷಗಳ ಹಿಂದೆಯೇ ಕೃಷಿ ಜೀವನ ಆರಂಭವಾಯಿತು ಎಂದು ಹೇಳಬಹುದು.[೨] ಸಿಂಧೂ ನಾಗರೀಕತೆಯ ಜನರು ನೀರಿನ ವ್ಯವಸ್ಥೆಯನ್ನು ವೈಜ್ಞಾನಿಕ ಮಾದರಿಯಲ್ಲಿ ಮಾಡಿಕೊಂಡಿದ್ದರು. ಹೀಗಾಗಿ ಸಿಂಧೂ ನದಿ ಸಂಸ್ಕೃತಿಯ ಅನೇಕ ನೆಲೆಗಳಲ್ಲಿ ನೀರಾವರಿ ವ್ಯವಸ್ಥೆಯ ಪುರಾವೆಗಳು ದೊರೆತಿವೆ. ರಾಜಸ್ಥಾನದ ಗಂಗಾನಗರ ಜಿಲ್ಲೆಯಲ್ಲಿನ ಕಾಲಿಬಂಗನ್ ಎಂಬ ಸಿಂಧೂ ಸಂಸ್ಕೃತಿಯ ನೆಲೆಯಲ್ಲಿ ನಡೆಸಿದ ಉತ್ಖನನದಲ್ಲಿ ನೀರಾವರಿ ವ್ಯವಸ್ಥೆಯನ್ನು ಅಳವಡಿಸಿಕೊಂಡಿರುವ ಜಮೀನಿನಲ್ಲಿ ಕೆಲವು ಕುರುಹುಗಳು ದೊರೆತಿವೆ.[೩]

ದಕ್ಷಿಣ ಭಾರತದಲ್ಲಿ ಕ್ರಿ.ಶ.ದ ಪೂರ್ವದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ವಾಸಿಸುತ್ತಿದ್ದರು. ಇದರ ಕಾಲ ಕ್ರಿ.ಪೂ. ೮೦೦ ರಿಂದ ಕ್ರಿ.ಶ. ೨ ನೇ ಶತಮಾನ. ಉತ್ತರ ಭಾಗದ ತಮಿಳುನಾಡಿನಲ್ಲಿ ಸ್ವಾಭಾವಿಕವಾಗಿಯೇ ಅನೇಕ ತಗ್ಗು ಪ್ರದೇಶಗಳು ಕಂಡುಬರುತ್ತವೆ. ಇಂತಹ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಮಳೆಯ ನೀರು ಸಂಗ್ರಹಗೊಳ್ಳುತ್ತದೆ. ಈ ಸಂಸ್ಕೃತಿಯ ಜನರು ಅಂತಹ ಸ್ವಾಭಾವಿಕವಾಗಿ ಶೇಖರಣೆಯಾದ ನೀರನ್ನು ಬಳಸಿಕೊಂಡರು ಮೊದಲಿಗೆ ದಕ್ಷಿಣ ಭಾರತದಲ್ಲಿ ನೀರಾವರಿ ಕೃಷಿ ಪದ್ದತಿಯನ್ನು ಪ್ರಾರಂಭಿಸಿದರೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[೪] ದಕ್ಷಿಣ ಭಾರತದ ಬೃಹತ್ ಶಿಲಾಯುಗದ ನೆಲೆಗಳ ಉತ್ಖನನ ನಡೆದಿದ್ದು ಕೆಲವು ನೆಲೆಗಳಲ್ಲಿ ಅಕ್ಕಿ, ರಾಗಿ, ಮುಂತಾದ ಧಾನ್ಯಗಳನ್ನು ಬೆಳೆಯುತ್ತಿದ್ದಾರೆಂಬುದು ಇದರಿಂದ ದೃಡವಾಗಿರುತ್ತದೆ.[೫]

ಭಾರತದ ಪ್ರಾಚೀನ ಸಾಹಿತ್ಯ ಕೃತಿಗಳಾದ ಶುಕ್ರನ ಶುಕ್ರನೀತಿಸಾರ, ಹಾಲನ ಗಥಾಸಪ್ತಸತಿ ಕೌಟಿಲ್ಯನ ಅರ್ಥಶಾಸ್ತ್ರ,ಮನುವಿನ ಧರ್ಮಶಾಸ್ತ್ರ, ಅಮರಸಿಂಹನ ಅಮರಕೋಶ ಹಾಗು ತಮಿಳಿನ ಸಂಗಂ ಸಾಹಿತ್ಯವು ಕೆರೆ ನೀರಾವರಿಯ ಕೃತಕ ಸಂಗ್ರಹಗಳು, ನಾಲೆಗಳು, ಸಾಗುವಳಿ ಪ್ರದೇಶ ಕೃಷಿಗೆ ಸಂಬಂಧಿಸಿದ ವಿಚಾರವನ್ನು ಪ್ರಸ್ತಾಪಿಸುತ್ತವೆ.[೬] ಕರ್ನಾಟಕದ ಅತ್ಯಂತ ಪ್ರಾಚೀನ ಕೆರೆಗಳಲ್ಲಿ ಚಂದ್ರವಳ್ಳಿಯ ಸಮೀಪದ ಚಂದ್ರವಳ್ಳಿಯ ಕೆರೆಯು ಒಂದಾಗಿದೆ. ಇದನ್ನು ಕದಂಬ ರಾಜನಾದ ಮಯೂರವರ್ಮ ನಿರ್ಮಿಸಿದನೆಂದು ಶಾಸನ ತಿಳಿಸುತ್ತದೆ.[೭] ಈ ಪ್ರದೇಶದಲ್ಲಿ ನಡೆಸಿದ ಉತ್ಕನನಗಳಿಂದ ಇದು ಪ್ರಾಚೀನ ಕೆರೆ ಎಂದು ದೃಢಪಟ್ಟಿದೆ. ಕರ್ನಾಟಕದಲ್ಲಿ ಶಾತವಾಹನರು, ಕದಂಬರು, ಗಂಗರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿಚಾಲುಕ್ಯರು, ಚೋಳ, ಹೊಯ್ಸಳರು ಮತ್ತು ವಿಜಯನಗರದ ಕಾಲದವರೆಗೆ ಕೆರೆಯ ಕಾಮಗಾರಿಗಳು ಒಂದು ಸಾವಿರ ವರ್ಷಕ್ಕೂ ಹೆಚ್ಚು ಕಾಲ ನಡೆದಿವೆ.[೮] ನೊಳಂಬರ ಕಾಲದಲ್ಲಿ ಅನೇಕ ಕೆರೆಗಳನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಅಲ್ಲದೆ ಕಲ್ಯಾಣಿ ಚಾಲುಕ್ಯರ ಕಾಲವನ್ನು "ಕೆರೆಗಳ ಸುವರ್ಣಯುಗ"ಎನ್ನಲಾಗಿದೆ. ಇವರ ಕಾಲದಲ್ಲಿ ಅನೇಕ ಕೆರೆಗಳು,ಛತ್ರ,ದೇವಾಲಯ, ಅಗ್ರಹಾರ, ಹಳ್ಳಿಗಳನ್ನು ನಿರ್ಮಿಸಲಾಗಿದೆ.[೯]

೧೩೩೬ ರಲ್ಲಿ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲೆ ಹೊಸ ತಿರುವನ್ನು ಪಡೆದು ಇವರ ಕಾಲದಲ್ಲಿ ಅನೇಕ ಬೃಹತ್ ನೀರಾವರಿ ಯೋಜನೆಗಳನ್ನು ಜಾರಿಗೆ ತಂದರು.ಇವರ ಕಾಲದ ಮಾಸೂರು ,ಆಂಧ್ರಪ್ರದೇಶದಲ್ಲಿ ಪೂರುಮಾಮಿಲ್ಲ , ಕಂಬಂ, ವ್ಯಾಸ ಸಮುದ್ರ, ರಾಯರ ಕೆರೆಗಳಂತಹ ಬೃಹತ್ ಕೆರೆಗಳನ್ನು ನಿರ್ಮಿಸಿದ್ದಾರೆ.[೧೦] ಅವರ ತರುವಾಯ ಅವರ ಪಾಳೆಗಾರರಾದ ಚಿತ್ರದುರ್ಗದ ಪಾಳೆಯಗಾರರು, ಮೈಸೂರು ಒಡೆಯರು, ಕೆಳದಿಯ ನಾಯಕರು , ಕೆರೆ ನಿರ್ಮಾಣವನ್ನು ಮುಂದುವರಿಸಿ ನಂತರದಲ್ಲಿ ಬಿಜಾಪುರದ ಸುಲ್ತಾನರು , ಹೈದರ್ ಟಿಪ್ಪು ಮತ್ತು ಆಂಗ್ಲರೂ ಸಹ ಹೆಚ್ಚಾಗಿ ಯುದ್ಧಗಳಲ್ಲಿ ತೊಡಗಿಸಿಕೊಂಡು ಕೆರೆ ನೀರಾವರಿಯನ್ನು ಕಡೆಗಣಿಸಿದರು. ಅಲ್ಪ ಪ್ರಮಾಣದಲ್ಲಿ ಕೆರೆ ನೀರಾವರಿಗೆ ಪ್ರೋತ್ಸಾಹ ನೀಡಿದರು. ಈ ವರೆಗಿನ ನಮ್ಮ ಕೆರೆಗಳ ಸಂಖ್ಯೆಯು ಸುಮಾರು ೨೦೦೦ ಇದ್ದು, ಕರ್ನಾಟಕದಲ್ಲಿ ಕೆರೆ, ಸಮುದ್ರ, ಸಂದ್ರ,ಸಾಗರ ಇವುಗಳಿಗೆ ಸಮಾನವಾದ ಹೆಸರುಳ್ಳ ಊರುಗಳು ಸಾವಿರಾರು ಇಂದಿಗೂ ಇರುವುದನ್ನು ನೋಡಿದರೆ ಪ್ರಾಚೀನ ಕಾಲದಿಂದಲೂ ಕೆರೆ ವ್ಯವಸ್ಥೆ ಇತ್ತೆಂದು ತಿಳಿಯುವುದರಲ್ಲಿ ಸಂಶಯವಿಲ್ಲ.[೧೧] ಒಟ್ಟಾರೆಯಾಗಿ ಪ್ರಾಚೀನ ಕಾಲದ ಕೆರೆಗಳು ನೀರಾವರಿ ವ್ಯವಸ್ಥೆಗಾಗಿಯೇ ನಿರ್ಮಿಸಿದ್ದು, ಅದರ ಸಹಾಯದಿಂದ ಕೃಷಿ ನಡೆಸಿ ಜೀವನ ನಡೆಸಲು ಪ್ರಮುಖ ಪಾತ್ರ ವಹಿಸುವುದನ್ನು ಕಾಣಬಹುದಾಗಿದೆ.

### ಚನ್ನರಾಯನ ದುರ್ಗ ಪರಿಸರದ ಮುಖ್ಯ ಕೆರೆಗಳು

ಚನ್ನರಾಯನ ದುರ್ಗ ಪರಿಸರದಲ್ಲಿ ನೀರಿನ ತಾಣಗಳಾದ ನದಿಗಳು, ಕೆರೆಗಳು, ಬಾವಿಗಳು, ಪ್ರಾಕೃತಿಕ ದೋಣಿಗಳು ಕಂಡು ಬರುತ್ತವೆ. ಅವುಗಳಲ್ಲಿ ಮುಖ್ಯವಾಗಿ ಸುಮಾರು ೯೮ ಕೆರೆಗಳು, ಅನೇಕ ಸಣ್ಣ ಪುಟ್ಟ ಬಾವಿಗಳು ೩ ನದಿಗಳನ್ನು ಒಳಗೊಂಡಿದ್ದು ಕೇವಲ ಮಳೆಗಾಲದಲ್ಲಿ ಮಾತ್ರ ಹರಿಯುತ್ತವೆ. ಅಂತಹ ಪ್ರಮುಖ ಐತಿಹಾಸಿಕ ಕೆರೆ, ಬಾವಿಗಳ ವಿವರಗಳನ್ನು ಈ ಕೆಳಕಂಡಂತೆ ತಿಳಿಯೋಣ.

### ಮರೆನಾಯಕನಹಳ್ಳಿಯ ಕನ್ನೇರಮ್ಮನ ಕೆರೆ

ಇದು ಚನ್ನರಾಯನದುರ್ಗದಿಂದ ವಾಯುವ್ಯ ಭಾಗಕ್ಕೆ ಸುಮಾರು ೮ ಕಿ.ಮೀ ದೂರದಲ್ಲಿದೆ. ಇದನ್ನು ಮಧುಗಿರಿಯ ಚಿಕ್ಕಪ್ಪಗೌಡನ ಸೇನಾನಿಯಾದ ಕುರಂಗರಾಯನ ವೇಶ್ಯೆಯು ಕಟ್ಟಿಸಿದ ಕೆರೆಯಾಗಿದೆ. ಈತನು ಚಿಕ್ಕಪ್ಪಗೌಡನ ಸಲಹೆಯ ಮೇರೆಗೆ ಸಿದ್ದರ ಬೆಟ್ಟದ ಮೇಲೆ ಕೋಟೆ ನಿರ್ಮಿಸಿ, ಆಳ್ವಿಕೆ ನಡೆಸಿದ ದಲಿತ ಪಾಳೆಗಾರನಾಗಿದ್ದಾನೆ. ಕುರಂಗರಾಜನ ವೇಶ್ಯೆಯು ಸಿದ್ದರ ಬೆಟ್ಟದ ತಪ್ಪಲಿನಲ್ಲಿ ವಾಸಿಸುತ್ತಿದ್ದಳು. ಅವಳು ವಾಸಿಸುತ್ತಿದ್ದ ಸ್ಥಳದಲ್ಲಿ ಒಂದು ಮಂಟಪವಿದೆ. ಅದನ್ನು ಅಲ್ಲಿನ ಸ್ಥಳೀಯರು ಸೂಳೆಗುಂಡು ಎಂಬ ಹೆಸರಿನಿಂದ ಕರೆಯುತ್ತಾರೆ. ಈ ಪ್ರದೇಶದಲ್ಲಿ ಹೆಚ್ಚು ಪ್ರವಾಹ ಉಂಟಾದುದರಿಂದ ಮರೆನಾಯಕನಹಳ್ಳಿಯ

ಸಮೀಪದಲ್ಲಿ ತನ್ನಲ್ಲಿದ್ದ ಎಲ್ಲಾ ಹಣ ವಡವೆಗಳನ್ನು ನೀಡಿ ಕೆರೆಯನ್ನು ನಿರ್ಮಿಸುತ್ತಾಳೆ. ಅಂದಿನಿಂದ ಇದನ್ನು ಸೂಳೆಕೆರೆ ಎಂದು ಕರೆಯಲಾಗಿದೆ. ಈ ಕೆರೆ ನಿರ್ಮಾಣದ ಬಗ್ಗೆ ಅಲ್ಲಿನ ಸ್ಥಳೀಯರು ತಿಳಿಸುವಂತೆ ಸಿದ್ದರ ಬೆಟ್ಟದ ತಪ್ಪಲಿನಿಂದ ಸುಮಾರು ೧ ಕಿ.ಮೀ. ದೂರದಲ್ಲಿರುವ ಸ್ಥಳದಲ್ಲಿ ಕೆರೆ ನಿರ್ಮಾಣಕ್ಕೆ ಬೇಕಾದ ದೊಡ್ಡ ಪ್ರಮಾಣದ ಗುಂಡುಗಳನ್ನು ಬೆಟ್ಟದ ತಪ್ಪಲಿನಿಂದ ಕೂಗಿ ಹೇಳಿ ಕಲ್ಲುಗಳನ್ನು ಎಸೆಯುತ್ತಿದ್ದಳು. ಆ ಕಲ್ಲುಗಳಿಂದ ಈ ಕೆರೆಯ ನಿರ್ಮಾಣವಾಗಿದೆ ಎಂಬ ಐತಿಹ್ಯವಿದೆ. ಇದನ್ನು ಗಮನಿಸಿದಾಗ ಕೆರೆಯ ನಿರ್ಮಾಣ ಆಕೆಯೇ ಮಾಡಿಸಿದಳೆಂದು ಗುರ್ತಿಸಲು ಸಹಾಯಕವಾಗಿದೆ.

ಕೆರೆಯ ನಿರ್ಮಾಣದಲ್ಲಿ ಬಳಸಿದ ತಾಂತ್ರಿಕತೆ ಉತ್ತಮ ರೀತಿಯಲ್ಲಿದ್ದು, ಕೆರೆಯ ಏರಿಯು ದಕ್ಷಿಣ ದಿಕ್ಕಿನಿಂದ ಪ್ರಾರಂಭವಾಗಿ ಉತ್ತರದಲ್ಲಿ ಬಾಗಿ ಪೂರ್ವದ ಕಡೆಗೆ ಸಾಗಿದೆ. ಕೆರೆಯ ಏರಿಯು ಸುಮಾರು ೨೦ ಅಡಿ ಎತ್ತರವನ್ನು ಹೊಂದಿದ್ದು, ಏರಿಯ ಮೇಲ್ಭಾಗದ ಅಗಲ ೧೦ ಮೀಟರ್ ಹಾಗು ಉದ್ದ ೫೦೦ ಮೀಟರ್ ಹೊಂದಿದೆ.ತೂಬಿನ ನಿರ್ಮಾಣದಲ್ಲಿ ದೊಡ್ಡ ಪ್ರಮಾಣದಲ್ಲಿ ಕಲ್ಲಿನ ದಿಮ್ಮಿಯನ್ನು ಬಳಸಲಾಗಿದ್ದು, ೨೦ ಟನ್ ಇದೆ.ವೃತ್ತಾಕಾರದ ಮಾದರಿಯನ್ನು ಒಳಗೊಂಡ ತೂಬಿಗೆ ಉತ್ತಮ ದರ್ಜೆ ಕಬ್ಬಿಣದ ರಾಡನ್ನು ಬಳಸಲಾಗಿದೆ. ಹೆಚ್ಚು ಆಕರ್ಷಕ ರೀತಿಯಲ್ಲಿ ನಿರ್ಮಿಸಲಾದ ಅದರ ಗೋಡೆಯ ನಿರ್ಮಾಣದಲ್ಲಿ ಗಾರೆಯನ್ನು ಬಳಸಲಾಗಿದೆ. ತೂಬಿನ ಮುಂಭಾಗದಲ್ಲಿ ಸುಮಾರು ೧೦ ಮೀಟರ್‌ನ ಎರಡು ಕಲ್ಲು ಕಂಬಗಳಿದ್ದು ಅದರ ಮೇಲೆ ಅಡ್ಡ ತೊಲೆಯಾಗಿ ಕಂಬ ನಿಲ್ಲಿಸಿದ್ದು, ಆ ಕಂಬದ ಮಧ್ಯೆ ಭಾಗದಲ್ಲಿ ಕಮಲದ ಹೂ ಅರಳಿದ ರೀತಿ ಕೆತ್ತಲಾಗಿದೆ. ತೂಬಿನಿಂದ ಕೆರೆ ಏರಿಗೆ ಬದಲು ಮೆಟ್ಟಿಲುಗಳ ವ್ಯವಸ್ಥೆ ಮಾಡಲಾಗಿದ್ದು ಮೇಲೇರಿದ ನಂತರ ಕೆರೆಯ ಏರೆಯ ಮೇಲೆ ಕನ್ನೆರಮ್ಮ ಎಂಬ ಚಿಕ್ಕ ಗುಡಿಯಿದೆ. ಈ ಗುಡಿಯಲ್ಲಿ ಮೂರು ಶಿಲ್ಪಗಳಿದ್ದು ಅವು ಮಹಾಸತಿ ಶಿಲ್ಪಗಳಾಗಿವೆ. ಶಿಲ್ಪಗಳ ರಚನೆಗಾಗಿ ಎಡ ಮತ್ತು ಬಲಭಾಗದಲ್ಲಿ ಬಂಡೆ ನಿಲ್ಲಿಸಿ ಮೇಲ್ಭಾಗ ಕಲ್ಲು ಎಳೆದು ಗುಡಿ ನಿರ್ಮಿಸಲಾಗಿದೆ. ಈ ಭಾಗದ ಜನರ ನಂಬಿಕೆ ಯಂತೆ ಈ ದೇವಾಲಾಯದ ಬಳಿ ಸ್ತ್ರೀಯರು ಬರುವಂತಿಲ್ಲ. ಈ ದೇವಿಗೆ ಪೂಜೆ ಸಲ್ಲಿಸುವವರು ೧೨ ವರ್ಷದ ಒಳಗಿನ ಮಕ್ಕಳು. ಇವರು ಪ್ರತಿ ಯುಗಾದಿ ಹಬ್ಬದ ನಂತರದ ದಿನ ಅಲ್ಲಿಗೆ ಬಂದು ಅಕ್ಕಿತೊಂಬಿಟ್ಟನ್ನು ಮಕ್ಕಳೇ ಸ್ವತಃ ತಯಾರಿಸಿ ಪೂಜೆ ಸಲ್ಲಿಸುವ ಸಂಪ್ರದಾಯವಿದೆ. ಇಲ್ಲಿನ ಮತ್ತೊಂದು ವಿಶೇಷವೆಂದರೆ ಈ ದೇವಾಲಯದ ಮೇಲ್ಭಾಗದಲ್ಲಿ ೮ ವೃತ್ತಕಾರದ ಗುಂಡುಗಳು ಇವೆ. ಈ ಗುಂಡುಗಳನ್ನು ಬಳಸಿ ಮಕ್ಕಳು ಅಕ್ಕಿಯನ್ನು ಕುಟ್ಟಿ ತಂಬಿಟ್ಟು ಮಾಡುತ್ತಾರೆ. ಇದರಿಂದ ನಮಗೆ ತಿಳಿದು ಬಂದ ಅಂಶವೆಂದರೆ ಈ ಕಲ್ಲುಗಳನ್ನು ಕೆರೆ ನಿರ್ಮಾಣದ ಕಾಲದಲ್ಲಿಯೇ ರುಬ್ಬುವ ಗುಂಡುಗಳಾಗಿವೆ. ಇಲ್ಲಿನ ಪೂಜಾ ದೇವಿಯು ಕುರಂಗರಾಜನ ವೈಶ್ಯ ಕನ್ನೇರಮ್ಮನ ಮಹಾಸತಿ ಶಿಲ್ಪ ಇರಬೇಕು ಎಂದು ತಿಳಿಯಬಹುದಾಗಿದೆ. ಈ ಕೆರೆಯು ಸುಮಾರು ೨೫೦ ಎಕರೆ ಜಮೀನಿಗೆ ನೀರನ್ನು ಒದಗಿಸುತ್ತದೆ. ಕೆರೆ ಕೋಡಿಯು ತೂಬಿನ ಈಶಾನ್ಯ ಭಾಗಕ್ಕೆ ಇರುವುದನ್ನು ಕಾಣಬಹುದು. ನೀರಿನ ಮಟ್ಟ ಅಳೆಯಲು ಅಲ್ಲಿ ಅಳತೆ ಕಲ್ಲನ್ನು ನೆಡಲಾಗಿ ಅದರಲ್ಲಿ ಸಂಖ್ಯೆಗಳನ್ನು ಕಲ್ಲಿನಲ್ಲಿ

ಕೆತ್ತಲಾಗಿದೆ. ಕೆರೆ ಕೋಡಿಯಲ್ಲಿ ಸಾಧಾರಣ ಗಾತ್ರದ ಕಲ್ಲು ಗಳನ್ನು ಭೂಮಿಗೆ ಅದಿಯಲಾಗಿದೆ. ಕಾರಣ ನೀರು ಹರಿಯುವಾಗ ಮಣ್ಣು ಕೊಚ್ಚಿ ಹೋಗದಂತೆ ತಡೆಗಟ್ಟುವ ಸಲುವಾಗಿ ನಿರ್ಮಿಸಲಾಗಿದೆ. ಈ ಕೆರೆಯ ನೀರಿನಿಂದ ಇಂದಿಗೂ ಅನೇಕ ಬೆಳೆಗಳನ್ನು ಬೆಳೆದು ಅಲ್ಲಿನ ರೈತರು ಜೀವನ ಸಾಗಿಸುತ್ತಿದ್ದಾರೆ. ಕೆರೆಗೆ ಸಂಬಂಧಿಸಿದ ಹಾಗೆ ಈ ಪ್ರದೇಶಗಳಲ್ಲಿ ಯಾವುದೇ ರೀತಿಯ ಶಾಸನ ಕಂಡು ಬಂದಿಲ್ಲ. ಇದರ ನಿರ್ಮಾಣದ ಶೈಲಿ ಗಮನಿಸಿದರೆ ಹಾಗು ಇತರೆ ದಾಖಲೆಗಳನ್ನು ನೋಡಿದಾಗ ಕುರಂಗರಾಯನ ವೇಶ್ಯೆ ಕನ್ನೇರಮ್ಮ ಎಂಬುವಳು ನಿರ್ಮಿಸಿದ್ದಾಳೆಂಬುದು ಸ್ಪಷ್ಟವಾಗುತ್ತದೆ.

**ತುಂಬಾಡಿ ಹಳೇಕೆರೆ**

ಇದು ಕೊರಟಗೆರೆ ತಾಲ್ಲೂಕಿನ ಪ್ರಾಚೀನ ಕೆರೆಗಳಲ್ಲಿ ಒಂದಾಗಿದೆ. ಇಂದಿಗೂ ಈ ಕೆರೆಯ ನೀರನ್ನು ಬಳಸಿ ಅಲ್ಲಿನ ಕೃಷಿಕರು ನೀರಾವರಿ ಬೇಸಾಯ ಮಾಡುತ್ತಿದ್ದಾರೆ. ಈ ಕೆರೆಯು ತುಮಕೂರಿನಿಂದ ಮಧುಗಿರಿ ಮಾರ್ಗವಾಗಿ ಚಲಿಸುವಾಗ ರಸ್ತೆಯ ಪೂರ್ವಕ್ಕಿದೆ. ಇದರ ಏರಿಯೂ ಕೂಡ ಪೂರ್ವಭಾಗಕ್ಕೆ ಕಂಡುಬರುತ್ತದೆ. ಈ ಕೆರೆಯನ್ನು ನಿರ್ಮಿಸಿದ್ದು ಪಾಳೆಗಾರರ ಕಾಲದಲ್ಲಿ ಎಂದು ತಿಳಿಯಬಹುದು. ಕಾರಣ ಕೆರೆಯ ಏರಿಯಲ್ಲಿ ವಿಜಯನಗರ ಕಾಲದ ವೀರಗಲ್ಲು ಇದ್ದು ೨ ಅಂಕಣವನ್ನು ಹೊಂದಿದೆ. ಮೊದಲ ಭಾಗದಲ್ಲಿ ಸ್ತ್ರೀಯು ಯುದ್ದದಲ್ಲಿ ಭಾಗವಹಿಸಿದ್ದು ಎಡಭಾಗದಲ್ಲಿ ಪುರುಷನು ಬಿಲ್ಲು ಬಿಡುತ್ತಿರುವ ಶಿಲ್ಪ ಇದರಲ್ಲಿದೆ. ಎರಡನೇ ಹಂತದಲ್ಲಿ ಪುಷ್ಪಕ ವಿಮಾನದಲ್ಲಿ ಚಾಮರ ಬೀಸಿ ಕರೆದೊಯ್ಯುವ ಶಿಲ್ಪದ ಕೆತ್ತನೆ ಇದೆ. ಇದನ್ನು ಗಮನಸಿದಾಗ ಈ ಕೆರೆಯು ನಿರ್ಮಾಣ ಅಂದಿನ ಪಾಳೆಗಾರನಾಗಿ ಆಳ್ವಿಕೆ ಮಾಡುತ್ತಿದ್ದ ಮಲ್ಲನಾಯಕ ನಿರ್ಮಿಸಿದ್ದು ಎನ್ನಬಹುದು. ಈ ಸ್ಥಳಕ್ಕೆ ಸಂಬಂಧಿಸಿದಂತೆ ತುಂಬಾಡಿಯ ಸಂಸ್ಥಾನದಲ್ಲಿ ಮಲ್ಲನಾಯಕ ಆಳ್ವಿಕೆ ಮಾಡುತ್ತಿದ್ದು, ಪಕ್ಕದ ಸಂಸ್ಥಾನವಾದ ವಡ್ಡಗೆರೆಯನ್ನು ತುಂಬಾಡಿಯ ಹೆಣ್ಣು ಮಗಳಾದ ವೀರನಾಗಮ್ಮ ಆಳ್ವಿಕೆ ನಡೆಸುತ್ತಿದ್ದಳು. ಈ ಸಂದರ್ಭದಲ್ಲಿ ಮಲ್ಲನಾಯಕನು ಮತ್ತು ವಡ್ಡಗೆರೆ ಸಂಸ್ಥಾನದ ನಾಗಪ್ಪನ ನಡುವೆ ಯುದ್ದವಾಗಿ ನಾಗಪ್ಪ ಮಡಿದನು. ಆದ್ದರಿಂದ ನಾಗಪ್ಪನ ಹೆಂಡಿತಿಯಾದ ವೀರನಾಗಮ್ಮ ತುಂಬಾಡಿ ನಡುವೆ ನಡೆದ ಯುದ್ಧದಲ್ಲಿ ಸೋತ ಕಾರಣ ನಾನು ಈ ನಾಡಿನಲ್ಲಿ ನೀರು, ಊಟವನ್ನು ಸ್ವೀಕರಿಸುವುದಿಲ್ಲ ಎಂದು ಶಪಥ ಮಾಡುತ್ತಾಳೆ ಎಂಬ ಐತಿಹ್ಯ ಒಳಗೊಂಡಿದೆ. ಇಂದಿಗೂ ಸಹ ವಡ್ಡಗೆರೆ ಮತ್ತು ತುಂಬಾಡಿ ಊರುಗಳ ನಡುವೆ ಯಾವುದೇ ವೈವಾಹಿಕ ಸಂಬಂಧಗಳು ಬೆಳೆಸುವುದಿಲ್ಲ ಎಂದು ಅಲ್ಲಿನ ಸ್ಥಳೀಯರು ತಿಳಿಸುತ್ತಾರೆ.

ಈ ಕೆರೆಗೆ ಸಂಬಂಧಿಸಿದ ಯಾವುದೇ ಶಾಸನಗಳ ದಾಖಲೆಗಳು ಕಂಡುಬಂದಿಲ್ಲ. ಸ್ಥಳೀಯರು ಸೂಚಿಸುವ ಪ್ರಕಾರ ಹಾಗು ಅಲ್ಲಿನ ವೀರಗಲ್ಲುಗಳಲ್ಲಿ ಕೆತ್ತಲಾದ ಹಾಗು ಬಳಸಿರುವ ಕಲ್ಲನ್ನು ಗಮನಿಸಿದಾಗ ಪಾಳೆಗಾರರ ಕಾಲದ ನಿರ್ಮಾಣ ಎನ್ನಬಹುದು. ಈ ಕೆರೆಯ ಮೇಲ್ಭಾಗದಲ್ಲಿ ಅನೇಕ ಸಣ್ಣ

ಪುಟ್ಟ ಕುಂಟೆಗಳು ಇವೆ . ಅವುಗಳು ಹೆಚ್ಚುವರಿ ನೀರು ಈ ಕೆರೆಯಲ್ಲಿಸಂಗ್ರಹಗೊಳ್ಳುತ್ತವೆ. ಕೆರೆ ಏರಿಯ ಮಧ್ಯಭಾಗದಲ್ಲಿ ಗೋವಿನ ಶಿಲ್ಪ ಕಂಡು ಬಂದಿದ್ದು ೨ ಅಡಿ ಎತ್ತರ ಹೊಂದಿದೆ. ಈ ಶಿಲ್ಪದಲ್ಲಿ ಗೋವಿನ ತಲೆ ಉದ್ದವಾಗಿದ್ದು ಕೊಂಬುಗಳು ನೇರವಾಗಿ ಇವೆ. ಕೊರಳಲ್ಲಿ ಗಂಟೆಯ ಮಾಲೆ ಹೊಂದಿದ್ದು, ಅದರ ಮುಂಭಾಗದಲ್ಲಿ ಕರು ತನ್ನ ತಾಯಿಕಡೆ ಮುಖ ಮಾಡಿ ನಿಂತಂತೆ ಖಂಡರಿಸಲಾಗಿದೆ. ಈ ಕೆರೆಯ ಏರಿಯು ಸುಮಾರು ೧ ಕಿ.ಮೀ. ಉದ್ದ ೧೦ ಅಡಿಗಳಷ್ಟು ಅಗಲ ಅಲ್ಲದೆ ೩೬ ಅಡಿಗಳಷ್ಟು ಎತ್ತರವಿದೆ. ಹಾಗು ಸುಮಾರು ೨೩೦ ವ್ಯಾಪ್ತಿಯನ್ನು ಒಳಗೊಂಡಿದ್ದು, ಹಾಗು ೮೦೦ ಎಕರೆ ಭೂಮಿಗೆ ನೀರು ಸರಬರಾಜು ಮಾಡುತ್ತದೆ.

### ತುಂಬಾಡಿ ಹೊಸಕೆರೆ

ಈ ಕೆರೆಯನ್ನು ಮೈಸೂರು ಮಹಾರಾಜರ ಕಾಲದಲ್ಲಿದ್ದ ಮಿರ್ಜಾ ಇಸ್ಮಾಯಿಲ್‌ರವರು ೧೯೩೩-೧೯೩೯ ರಲ್ಲಿ ಸ್ಥಾಪನೆ ಮಾಡಿದ್ದಾರೆ. ಮಿರ್ಜಾ ಇಸ್ಮಾಯಿಲ್‌ರ ಸಹಯೋಗದಲ್ಲಿ ಅಮಿಲ್ ಉಲ್‌ಮುಲಕ್ ಕೂಡ ಭಾಗವಹಿಸಿದ್ದರು ಎಂದು ಅಲ್ಲಿನ ಉದ್ಘಾಟನಾ ಫಲಕ ತಿಳಿಸುತ್ತದೆ. ಈ ಹೊಸ ಕೆರೆಯ ನಿರ್ಮಾಣಕ್ಕೆ ಸರ್ಕಾರವು ಒಟ್ಟು ವೆಚ್ಚ ೧೯೪೦೦೦ ಸಾವಿರ ರೂಗಳನ್ನು ವೆಚ್ಚ ಮಾಡಲಾಗಿದೆ. ಈ ಕೆರೆಯು ೬೦೦ ಹೆಕ್ಟೇರ್ ಒಳಗೊಂಡಿದ್ದು ೨೧೪ ಎಕರೆ ನೀರನ್ನು ಕೃಷಿಗೆ ಸರಬರಾಜು ಮಾಡುತ್ತದೆ. ಇಲ್ಲಿನ ನೀರಾವರಿಯ ಅಂದಾಜು ಜಮೀನು ೧೯.೮೯ ಆಗಿದೆ. ಇದರ ಏರಿಯ ಎತ್ತರ ಸುಮಾರು ೨೦ ಅಡಿಗಳಷ್ಟು ಎತ್ತರವಿದ್ದು ಮೇಲ್ಭಾಗದ ಏರಿ ವಿಶಾಲವಾಗಿರುವುದನ್ನು ನಾವು ನೋಡಬಹುದಾಗಿದೆ. ಕೆರೆಯ ಏರಿ ಕಟ್ಟಲು ಬಳಸಿದ ಕಲ್ಲು ಸಾಧಾರಣ ಗಾತ್ರದವುಗಳಾಗಿವೆ.ಈ ಪ್ರದೇಶದಲ್ಲಿ ೨ ಕೆರೆಗಳು ಇದ್ದು, ಇಲ್ಲಿನ ಬೇಸಾಯ ಮಾಡಲು ಈ ೨ ಕೆರೆಗಳ ನೀರನ್ನು ಬಳಸಿಕೊಂಡು ವಿವಿಧ ಬೆಳೆಗಳನ್ನು ಬೆಳೆದು ಉತ್ತಮ ಜೀವನ ನಡೆಸುತ್ತಾರೆ. ಈ ಪ್ರದೇಶದ ೨ ಪ್ರಾಚೀನ ಕೆರೆಗಳು ಇಲ್ಲಿನ ರೈತರು ಆರ್ಥಿಕವಾಗಿ ಮುಂದುವರೆಯಲು ಸಹಾಯಕವಾಗಿವೆ.

### ಮಣುವಿನ ಕುರಿಕೆ

ಇದು ಸಿದ್ದರಬೆಟ್ಟದ ತಪ್ಪಲಿನಿಂದ ಸುಮಾರು ೧೦ ಕಿ.ಮೀ ಅಂತರದಲ್ಲಿ ಕಂಡುಬರುವ ಗ್ರಾಮವಾಗಿದೆ. ಈ ಗ್ರಾಮದಲ್ಲಿ ಪಾಳೆಗಾರರ ಕಾಲದಲ್ಲಿ ನಿರ್ಮಾಣವಾದ ಕೆರೆಯನ್ನು ಇಲ್ಲಿ ಕಾಣಬಹುದಾಗಿದೆ. ಇದರ ತೂಬಿನ ಕಲ್ಲಿನಲ್ಲಿ ಮತ್ಸ್ಯ ಶಿಲ್ಪ ಕೆತ್ತಲಾಗಿದೆ. ಇದನ್ನು ಗಮನಿಸಿದರೆ ಈ ಕೆರೆಯಲ್ಲಿ ಮೀನು ಸಾಕಾಣೆಗೂ ಪ್ರಾಧಾನ್ಯತೆ ನೀಡಲಾಗಿತ್ತು ಎಂಬ ಅಂಶ ತಿಳಿದು ಬರುತ್ತದೆ. ಇದರ ಏರಿಯನ್ನು ಪಶ್ಚಿಮ ದಿಕ್ಕಿನಿಂದ ನಿರ್ಮಿಸಲಾಗಿದ್ದು, ಏರಿಯ ಹಿಂಬದಿಯಲ್ಲಿ ಗ್ರಾಮ ಇರುವುದು ಕಂಡು ಬರುತ್ತದೆ. ಕೆರೆಯ ವಿಸ್ತೀರ್ಣ ಸುಮಾರು೨೫೦ ಹೆಕ್ಟೇರ್‌ಗಳಷ್ಟು ಒಳಗೊಂಡಿದೆ. ಕೆರೆಯ ಏರಿಯು ಮೇಲ್ಭಾಗಕ್ಕೆ

ಬಂದಂತೆ ಕಿರಿದಾದ ವ್ಯಾಸವನ್ನು ಒಳಗೊಂಡಿದೆ. ಈ ಪ್ರದೇಶದ ಸುಮಾರು ೨೦೦ ಹೆಕ್ಟೇರ್ ಜಮೀನಿಗೆ ನೀರು ಒದಗಿಸುವ ಸಾಮರ್ಥ್ಯ ಒಳಗೊಂಡಿದೆ. ಏರಿಯ ಮಧ್ಯಭಾಗದಲ್ಲಿ ಕೋಡಿ ಬಸವಣ್ಣನ ದೇವಾಲಯವಿದ್ದು, ಎರಡು ವೀರಗಲ್ಲುಗಳನ್ನು ಒಳಗೊಂಡಿದೆ ೨ ಅಡಿ ಎತ್ತರ ಹಾಗು ೨ ಅಡಿ ಅಗಲ ಹೊಂದಿದ್ದು, ಕೈಯಲ್ಲಿ ಕತ್ತಿಯನ್ನು ಹಿಡಿದು ನಿಂತಿರುವ ದೃಶ್ಯವನ್ನು ಕಾಣಬಹುದು ಮತ್ತೊಂದು ಶಿಲ್ಪವಿದ್ದು ಇದು ವಿಘ್ನ ವಿನಾಯಕ ಶಿಲ್ಪವಾಗಿದೆ. ಅದರ ಮುಂಭಾಗದಲ್ಲಿ ನಂದಿ ಶಿಲ್ಪ ಕಾಣಬಹುದು. ಹೀಗೆ ಇಲ್ಲಿ ದೊರೆತ ಐತಿಹಾಸಿಕ ಕುರುಹುಗಳನ್ನು ಅರಿತು ಮುಖ್ಯವಾದ ಕೆರೆಗಳ ವಿವರವನ್ನು ತಿಳಿಯಬಹುದಾಗಿದೆ.ಅಲ್ಲದೆ ಇವುಗಳ ಪ್ರಾಮುಖ್ಯತೆಯನ್ನು ತಿಳಿಸುವಲ್ಲಿ ಮುಖ್ಯ ಪಾತ್ರ ವಹಿಸಿದೆ. ಇಂತಹ ಐತಿಹಾಸಿಕ ಕೆರೆಯು ಇಂದು ನಿರ್ಲಕ್ಷ್ಯಕ್ಕೆ ಒಳಗಾಗಿ ಅನೇಕ ಬೇಡವಲ್ಲದ ಸಸ್ಯಗಳು ಕೆರೆಯ ಒಳಭಾದಲ್ಲಿ ಬೆಳೆದು ಮಣ್ಣಿನಿಂದ ಕೆರೆಯ ಆಳ ಮುಚ್ಚಿ ಹೋಗುತ್ತಿದೆ. ಅಲ್ಲದೆ ಇಂದಿಗೂ ಸಹ ಈ ಕೆರೆಯಲ್ಲಿ ಮೀನು ಸಾಕಾಣಿಕೆ ಇರುವುದನ್ನು ಕಾಣಬಹುದು.

**ಸಿದ್ದರಬೆಟ್ಟದ ಮೇಲಿನ ಅಲಸಂದೆ ಕೆರೆ**

೧೯೫೦ ಮೀ. ಎತ್ತರ ಹೊಂದಿದ ಸಿದ್ದರ ಬೆಟ್ಟದ ತುದಿಯಲ್ಲಿ ಮಧುಗಿರಿ ಪಾಳೇಗಾರನಾದ ಚಿಕ್ಕಪ್ಪಗೌಡನ ಸಲಹೆ ಮೇರೆಗೆ ಕೋಟೆ ನಿರ್ಮಿಸಿ , ಆಳ್ವಿಕೆ ನಡೆಸಿದ ಕುರಂಗ ರಾಯನು ಈ ಕೆರೆಯನ್ನು ನಿರ್ಮಿಸಿದ್ದಾನೆ. ಕೆರೆಯ ವಿನ್ಯಾಸವು ಅರ್ಧಚಂದ್ರಾಕೃತಿಯನ್ನು ಒಳಗೊಂಡಿದೆ. ಸ್ಥಳೀಯರ ಬಾಯಲ್ಲಿ ಈ ಕೆರೆಯನ್ನು ಅರ್ದಸಂದ್ರ, ಅಲಸಂದ್ರ, ಅಲಸಂದೆ ಎಂದು ಕೊನೆಗೆ ಅಲಸಂದೆ ಕೆರೆ ಎಂದು ಕರೆಯಲಾಗಿದೆ.[೧೨] ಈ ಕೆರೆಯನ್ನು ನಿರ್ಮಿಸಲು ಕಾರಣವೆಂದರೆ , ಇಲ್ಲಿನ ಜೀವರಾಶಿಗಳ ಉಪಯೋಗಕ್ಕಾಗಿ ಹಾಗು ಕೋಟೆಯ ಜನತೆ ಬಳಸುವ ಸಲುವಾಗಿ ನಿರ್ಮಿಸಲಾಗಿದೆ. ಇದು ೨೦-೨೫ ಅಡಿ ಆಳವಾಗಿದ್ದು ಸುತ್ತಲೂ ಏರಿಯನ್ನು ಒಳಗೊಂಡಿದೆ ಇದರ ವಿಸ್ತೀರ್ಣವು ೧೩ ಅಡಿ ಎತ್ತರ ೨೮ ಅಡಿ ಉದ್ದ ಹಾಗು ೮ ಅಡಿ ಅಗಲವನ್ನು ಹೊಂದಿದೆ. ಈ ಕೆರೆಗೆ ಯಾವುದೇ ತೂಬನ್ನು ನಿರ್ಮಿಸಿಲ್ಲ. ಕೋಟೆ ನಿರ್ಮಾಣದ ವೇಳೆಯಲ್ಲಿ ಕೆರೆ ನಿರ್ಮಿಸಲಾಗಿದ್ದು ಸುಮಾರು ೪೦೦ ವರ್ಷಗಳ ಹಿಂದಿನ ಐತಿಹಾಸಿಕ ಕೆರೆಯಾಗಿದೆ. ತನ್ನ ಪರಿಸರದಲ್ಲಿ ಯಾವುದೇ ಜಾತ್ರೆಯಾದರೂ, ಇಲ್ಲಿಗೆ ಉತ್ಸವ ಮೂರ್ತಿಗಳನ್ನು ತಂದು ಪೂಜೆ ಸಲ್ಲಿಸುವ ಸಂಪ್ರದಾಯ ಇಂದಿಗೂ ನಡೆಯುತ್ತದೆ. ಆದರೆ ಈ ಕೆರೆಯ ನೀರು ವ್ಯವಸಾಯಕ್ಕೆ ಬಳಸಿಕೊಳ್ಳಲು ಸಾಧ್ಯವಿಲ್ಲ. ಈ ಪರಿಸರದ ಪ್ರಮುಖ ಐತಿಹಾಸಿಕ ಕೆರೆಯಾಗಿ ಉಳಿದಿದೆ. ಚನ್ನರಾಯನದುರ್ಗ ಪರಿಸರದಲ್ಲಿ ಇನ್ನೂ ಅನೇಕ ಕೆರೆಗಳಿದ್ದು ಐತಿಹಾಸಿಕವಾಗಿ ಮುಖ್ಯ ಕೆರೆಗಳನ್ನು ಮಾತ್ರ ಇಲ್ಲಿ ಗುರ್ತಿಸಲಾಗಿದೆ. ಈ ಕೆರೆಗಳು ಪ್ರಾಚೀನ ಕಾಲದಿಂದಲೂ ಮಾನವನ ವ್ಯವಸಾಯಕ್ಕೆ ಅನುಕೂಲವಾಗಿವೆಯೆಂದು ಹೇಳಬಹುದು.

### ಚನ್ನರಾಯನ ದುರ್ಗದ ಕೆರೆ

ಈ ಕೆರೆಯನ್ನು ಚನ್ನರಾಯನ ದುರ್ಗ ಕೋಟೆಯ ದಕ್ಷಿಣ ಬಾಗಿಲಿಗೆ ಎದುರಾಗಿ ಬೆಟ್ಟದ ಕೆಳಭಾಗದಲ್ಲಿ ಕೆರೆಯನ್ನು ನಿರ್ಮಿಸಲಾಗಿದೆ. ಇದರ ನಿರ್ಮಾಣವು ೧೩ ನೇ ಶತಮಾನದ ಕಾಲದಲ್ಲಿ ನಡೆದಿದೆ ಎಂಬುದನ್ನು ಅವರು ತೂಬಿಗೆ ಬಳಸಿದ ಕಲ್ಲಿನ ಶೈಲಿಯ ಆಧಾರದ ಮೇಲೆ ಗುರ್ತಿಸಬಹುದಾಗಿದೆ. ಅಲ್ಲದೆ ತೂಬು ಕಟ್ಟುವ ಸಂದರ್ಭದಲ್ಲಿ ಬಳಸಿದ ತಾಂತ್ರಿಕತೆ ಎಲ್ಲವನ್ನು ಗಮನಿಸಿದರೆ, ಇದರ ನಿರ್ಮಾಣ ಕಾರ್ಯ ಪಾಳೆಗಾರರ ಕಾಲದ್ದಾಗಿದೆ. ಆದರೆ ಈ ಕೆರೆ ನಿರ್ಮಾಣದ ಬಗ್ಗೆ ತಿಳಿಸುವ ಯಾವುದೇ ಶಾಸನ ದಾಖಲೆಗಳು ನಮಗೆ ದೊರೆತಿಲ್ಲ. ಕೆರೆಯ ಏರಿಯು ೧ ಕಿ.ಮೀ. ಉದ್ದ ಇದ್ದು, ತಳಭಾಗದಿಂದ ಏರಿಯ ಎತ್ತರವು ೧೮ ಅಡಿ ಹೊಂದಿದೆ. ಮೇಲ್ಭಾಗಕ್ಕೆ ಬಂದಂತೆಲ್ಲ ಕೆರೆ ಏರಿಯ ವಿಸ್ತೀರ್ಣದಲ್ಲಿ ಕಡಿಮೆಯಾಗುತ್ತಾ ಬಂದಿದ್ದು , ಕೆರೆಯ ಆಳ ೩ ಅಡಿಗಳಿಷ್ಟಿರಬಹುದು ಕೆರೆ ಕೋಡೆಯ ನಿರ್ಮಾಣದಲ್ಲಿ ಮಣ್ಣು ಸಾಗಿಸದ ರೀತಿಯಲ್ಲಿ ಕಲ್ಲನ್ನು ನೆಲಕ್ಕೆ ಹಾಸಲಾಗಿದ್ದು ಇಳಿಜಾರಿನ ರೀತಿಯಲ್ಲಿ ಕಲ್ಲು ಕಟ್ಟಡ ಕಟ್ಟಲಾಗಿದೆ. ಏರಿಯ ಮಣ್ಣು ಕೊಚ್ಚಿಕೊಂಡು ಹೋಗದಂತೆ ಹುಲ್ಲಿನ ಹಾಸನ್ನು ಏರಿಗೆ ಅಂಟಿಸಿ ಏರಿ ಬೆಳೆಸಲಾಗಿದೆ. ಹಾಗೆ ತೂಬಿಗೆ ಬಳಸಿದ ಕಬ್ಬಿಣ ಉತ್ತಮ ಗುಣಮಟ್ಟದ್ದಾಗಿದೆ. ಇದು ಸುಮಾರು ೧೩೮ ಹೆಕ್ಟೇರ್ ವಿಸ್ತೀರ್ಣಹೊಂದಿದ್ದು ಸುಮಾರು ೮ ಹೆಕ್ಟೇರ್‌ಗೆ ನೀರು ಒದಗಿಸಿ ಅಲ್ಲಿನ ಆರ್ಥಿಕ ಪರಿಸ್ಥಿತಿ ಸುಧಾರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಕೆರೆಯ ನೀರನ್ನು ಬಳಸಿಕೊಂಡು ಅಲ್ಲಿನ ರೈತರು ಭತ್ತ, ಕಬ್ಬು, ರಾಗಿ ಹಾಗು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಒಟ್ಟಿನಲ್ಲಿ ಚನ್ನರಾಯನದುರ್ಗ ಪರಿಸರದಲ್ಲಿ ಐತಿಹಾಸಿಕ ಕೆರೆಗಳಿದ್ದು, ಇಂದಿಗೂ ಸಹ ಕೃಷಿ ಕಾರ್ಯಕ್ಕೆ ಸಹಾಯಕವಾಗುತ್ತಿವೆ.

### ೬.೨ ನದಿಗಳು

ಕೊರಟಗೆರೆ ಪರಿಸರದಲ್ಲಿ ನೀರಿನ ತಾಣವಾಗಿ ಅನೇಕ ನದಿಗಳು ತಾಲ್ಲೂಕನ್ನು ಸ್ಪರ್ಶಿಸಿ ಮುಂದೆ ಚಲಿಸುತ್ತವೆ. ಈ ನದಿಗಳೆಲ್ಲವೂ ಕೇವಲ ಮಳೆಗಾಲದಲ್ಲಿ ಹರಿಯುವ ನದಿಗಳೇ ಆಗಿರುವುದರಿಂದ ಮಳೆ ನೀರನ್ನು ಕೆರೆಗಳ ಮೂಲಕ ಸಂಗ್ರಹಿಸಿ ನಂತರ ವ್ಯವಸಾಯಕ್ಕೆ ಬಳಸಿಕೊಳ್ಳಲಾಗುತ್ತದೆ. ಈ ಪರಿಸರದ ಪ್ರಮುಖ ನದಿಗಳನ್ನು ಈ ಕೆಳಗಿನಂತೆ ತಿಳಿಯೋಣ.

### ಜಯಮಂಗಲಿ

ಜಯ ಮತ್ತು ಮಂಗಲಿ ಎಂಬ ಎರಡು ನದಿಗಳು ಉತ್ತರ ಪಿನಾಕಿನಿ ಅಥವಾ ಪೆನ್ನಾರ್ ನದಿಯ ಉಪನದಿಗಳು. ಇವು ತುಮಕೂರು ತಾಲ್ಲೂಕಿನ ಅರಣ್ಯ ಪ್ರದೇಶವಾದ ದೇವರಾಯನದುರ್ಗದಲ್ಲಿ ಉಗಮವಾಗಿ, ಕೊರಟಗೆರೆ ತಾಲ್ಲೂಕಿನ ಇರಕಸಂದ್ರದ ಮೂಲಕ ಹರಿದು ಹೊಳವನಹಳ್ಳಿಯಲ್ಲಿ

ಗರುಡಾಚಲ ಉಪನದಿಯನ್ನು ಕೂಡುತ್ತವೆ. ಈ ನದಿಗಳು ಸುಮಾರು ೨೭ ಕಿ.ಮೀ ದೂರ ತಾಲ್ಲೂಕಿನಲ್ಲಿ ಕ್ರಮಿಸುತ್ತವೆ. ಈ ನದಿ ನೀರನ್ನು ಇರಕಸಂದ್ರದ ಪ್ರದೇಶದಲ್ಲಿ ಕೆರೆ ನಿರ್ಮಿಸಿ ಅಲ್ಲಿನ ರೈತರಿಗೆ ಕೃಷಿ ಮಾಡಲು ಸಹಾಯಕವಾಗಿದೆ.[೧೩] ಈ ಕೆರೆಯ ಸಹಾಯದಿಂದ ಇಲ್ಲಿನ ರೈತರು ಅನೇಕ ಬೆಳೆಗಳನ್ನು ಬೆಳೆಯಲು ಸಹಾಯಕವಾಗಿದೆ.

### ಗರುಡಾಚಲ ನದಿ

ಗರುಡಾಚಲ ನದಿಯು ತುಮಕೂರು ತಾಲ್ಲೂಕಿನ ದೇವರಾಯನದುರ್ಗದ ಆಗ್ನೇಯ ಮೂಲೆಯಲ್ಲಿ ಹುಟ್ಟಿ, ಉತ್ತರಾಭಿಮುಖವಾಗಿ ಹರಿದು ತಾಲ್ಲೂಕಿನ ಹೊಳವನಹಳ್ಳಿ ಬಳಿ ಜಯಮಂಗಲಿ ನದಿಯನ್ನು ಸೇರುತ್ತದೆ. ಈ ನದಿಗೆ ಅಡ್ಡಲಾಗಿ ತೀತಾ ಜಲಾಶಯವನ್ನು ನಿರ್ಮಿಸಲಾಗಿದೆ. ಈ ಜಲಾಶಯವು ತಾಲ್ಲೂಕಿನ ೨ ನೇ ಅತಿ ದೊಡ್ಡ ಜಲಾಶಯವಾಗಿದೆ.[೧೪] ಇದು ಸುಮಾರು ೮೦೦ ಹೆಕ್ಟೇರ್ ಪ್ರದೇಶವನ್ನು ಆವರಿಸಿದೆ. ಇದರ ಅನುಕೂಲದಿಂದ ಇಲ್ಲಿನ ರೈತರು ಸುಮಾರು ೧೦೦೦೦ ಹೆಕ್ಟೇರ್ ಪ್ರದೇಶವನ್ನು ಕೃಷಿಗೆ ಅಳವಡಿಸಿ ನೀರನ್ನು ಉಣಿಸುವ ಮೂಲಕ ಆರ್ಥಿಕವಾಗಿ ಅನುಕೂಲ ಪಡೆಯುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಅಲ್ಲಿನ ಗ್ರಾಮದೇವತೆಯಾದ ಗೊರವನಹಳ್ಳಿ ಶ್ರೀ ಲಕ್ಷ್ಮಿದೇವಿಯ ಸನ್ನಿಧಾನಕ್ಕೆ ಬರುವ ಭಕ್ತರಿಗೆ ಪ್ರವಾಸಿ ತಾಣದಂತೆ ಈ ಜಲಾಶಯ ಮಾರ್ಪಟ್ಟಿದೆ.

### ಸುವರ್ಣಮುಖಿ ನದಿ

ಈ ಪರಿಸರದಲ್ಲಿ ಹರಿಯುವ ಮತ್ತೊಂದು ಪ್ರಮುಖ ನದಿಯೆಂದರೆ ಸುವರ್ಣಮುಖಿ ನದಿ. ಇದು ಚನ್ನರಾಯನದುರ್ಗದ ಪರ್ವತ ಶ್ರೇಣಿಯ ಸಿದ್ಧರ ಬೆಟ್ಟದಲ್ಲಿ ಹುಟ್ಟಿ ತಾಲ್ಲೂಕಿನ ಸುಮಾರು ೨೪೧.೫ ಕಿ.ಮೀ. ದೂರ ಕ್ರಮಿಸಿ ರಾಂಪುರದ ಬಳಿ ಜಯಮಂಗಲಿಯನ್ನು ಸೇರುತ್ತದೆ. ಈ ನದಿಗೆ ಅಡ್ಡಲಾಗಿ ೧೮೮೮ ರಿಂದ ೧೮೯೨ ರವರೆಗೆ ಕ್ಷಾಮ ಪರಿಹಾರ ಕಾಮಗಾರಿ ಯೋಜನೆ ಅನ್ವಯ ಬೋರನ ಕಣಿವೆ ಜಲಾಶಯ ನಿರ್ಮಿಸಲಾಗಿದೆ. ಇದು ೫೬೨ ಹೆಕ್ಟೇರ್ ನೀರು ಸರಬರಾಜು ಮಾಡುತ್ತದೆ.[೧೫] ಈ ನದಿ ಹರಿಯುವ ಸಂದರ್ಭದಲ್ಲಿ ನದಿಯ ಬಲ ಮತ್ತು ಎಡ ದಂಡೆಗಳಲ್ಲಿ ತೆಂಗು ಮತ್ತು ಅಡಿಕೆ ತೋಟಗಳನ್ನು ನಿರ್ಮಿಸಿಕೊಂಡು ವಾಣಿಜ್ಯ ಬೆಳೆಗಳನ್ನು ಇಲ್ಲಿನ ರೈತರು ಬೆಳೆಯುತ್ತಾರೆ.

### ೬.೩ ಪ್ರಾಕೃತಿಕ ದೋಣೆಗಳು

ಪ್ರಾಕೃತಿಕ ದೋಣೆಗಳು ನೀರಿನ ಪ್ರಮುಖ ತಾಣಗಳು ಎಂದರೆ ತಪ್ಪಾಗಲಾರದು. ಅಂದಿನ ಪಾಳೆಗಾರರು ಬೆಟ್ಟಗಳ ಮೇಲಣ ಕೋಟೆಗಳನ್ನು ನಿರ್ಮಿಸಿಕೊಂಡು ಸೈನ್ಯ ಸಮೇತವಾಗಿ ಕೋಟೆಯ

ಒಳಭಾಗದಲ್ಲಿ ವಾಸಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಅವರಿಗೆ ನೀರು ಅವಶ್ಯಕವಾಗಿತ್ತು. ಆದ್ದರಿಂದ ಕೋಟೆ ಪ್ರದೇಶದ ಬಂಡೆಯ ಮೇಲೆ ಬಿದ್ದ ಮಳೆ ನೀರು ಒಂದು ಕಡೆ ಶೇಖರಣೆ ಆಗಿರುತ್ತಿತ್ತು ಇಂತಹ ಶೇಖರಣೆಯಾದ ಸ್ವಾಭಾವಿಕ ನೀರಿನ ದೊಣೆಯನ್ನು ಕೃತಕವಾಗಿ ಅವಗಳನ್ನು ರಕ್ಷಣೆ ಮಾಡಿ ಬಳಸುತ್ತಿದ್ದರು.

**ಗಂಗಾಧರೇಶ್ವರ ಪುಷ್ಕರಣಿ**

ಗಂಗಾಧರೇಶ್ವರ ಪುಷ್ಕರಣಿಯು ಕೊರಟಗೆರೆ ಬೆಟ್ಟದ ಮೇಲಿರುವ ಗವಿ ಗಂಗಾಧರೇಶ್ವರ ದೇವಾಲಯದ ಪಕ್ಕದಲ್ಲಿರುವ ಪುಷ್ಕರಣಿಯಾಗಿದೆ. ಇದು ತುಂಬಾ ವಿಶಾಲವಾಗಿದ್ದು ಸುಂದರವಾಗಿದೆ. ಇದು ಕೊರಟಗೆರೆ ಕಾಲದಲ್ಲಿ ನೈಸರ್ಗಿಕವಾದ ಬಂಡೆಗೆ ಇಟ್ಟಿಗೆ ಮತ್ತು ಗಾರೆ ಕಲ್ಲನ್ನು ಬಳಸಿ ನಿರ್ಮಿಸಿರುವರು. ಇದು ಬೆಟ್ಟದ ಮೇಲೆ ಗವಿ ಗಂಗಾಧರೇಶ್ವರನ ಪೂಜೆಗೆ ಹೋಗುವ ಜನರಿಗೆ ಹಾಗು ದೇವತಾ ಕಾರ್ಯಕ್ಕೆ ನೀರನ್ನು ಒದಗಿಸುತ್ತದೆ. ಬೇಸಿಗೆಯಕಾಲದಲ್ಲೂ ಇದು ತಣ್ಣನೆಯ ನೀರನ್ನು ಹೊಂದಿರುತ್ತದೆ. ಈ ದೊಣೆಯು ಗಂಗಾಧರೇಶ್ವರ ದೇವಾಲಯದ ಗರ್ಭಗುಡಿಯ ಎಡಭಾಗದಲ್ಲಿದೆ. ಇದರ ಒಳ ಪ್ರವೇಶಿಸಲು ಕಲ್ಲಿನಿಂದ ಕಟ್ಟಿದ ೨೦ ಮೆಟ್ಟಿಲನ್ನು ಇಳಿದರೆ ದೊಣೆಯ ನೀರನ್ನು ಸ್ಪರ್ಶಿಸಬಹುದು. ಮಳೆಗಾಲದಲ್ಲಿ ನೀರು ಹೆಚ್ಚು ಸಂಗ್ರಹವಾಗಿರುತ್ತದೆ. ಮೆಟ್ಟಿಲುಗಳ ಬಲಭಾಗಕ್ಕೆ ಗಾರೆ ಮತ್ತು ಇಟ್ಟಿಗೆಯಿಂದ ಮಾಡಿದ ಗೋಡೆಯನ್ನು ನಿರ್ಮಿಸಿ ರಕ್ಷಣೆ ಒದಗಿಸಲಾಗಿದೆ. ಈ ಪುಷ್ಕರಣಿಯು ಚೌಕಾಕಾರದ ಮೆಟ್ಟಿಲುಗಳಿಂದ ಕೂಡಿದ್ದು, ಒಳ ಹೊಂದಂತೆ ಕಿರಿದಾದ ವ್ಯಾಸವನ್ನು ಹೊಂದಿದೆ. ಇದು ಸುಮಾರು ೩೦ ಮೀಟರ್ ಆಳ, ೨೮ ಮೀ. ಅಗಲ ಹೊಂದಿದೆ. ಈ ಪುಷ್ಕರಣಿಯ ಎಡಭಾಗದಲ್ಲಿ ಸ್ವಾಭಾವಿಕ ಬಂಡೆಯಲ್ಲಿ ನಂದಿ ವಿಗ್ರಹವನ್ನು ಕೆತ್ತಲಾಗಿದ್ದು ೩೫ ಸೆಂ.ಮೀ. ಅಗಲ ೧೫ ಸೆಂ.ಮೀ. ಉದ್ದ ಹೊಂದಿದ್ದು ಕೊರಳಿಗೆ ಮಾಲೆ ಇತರೆ ಅಲಂಕಾರಿಕ ಕೆತ್ತನೆಯನ್ನು ಒಳಗೊಂಡಿದೆ. ೧

**ಈಶ್ವರ ದೇವಾಲಯದ ಸ್ವಾಭಾವಿಕ ದೊಣೆ**

ಇದು ಚನ್ನರಾಯನದುರ್ಗ ಕೋಟೆಯನ್ನು ಒಳ ಪ್ರವೇಶಿಸಿದಾಗ ಒಂದನೇ ಕೋಟೆಯ ಆವರಣದಲ್ಲಿ ಕಂಡುಬರುವ ಈಶ್ವರ ದೇವಾಲಯದ ಮುಂದೆ ಈ ದೊಣೆ ಕಂಡು ಬರುತ್ತದೆ. ಇಲ್ಲಿನ ದೊಣೆಯಲ್ಲಿ ಬೇಸಿಗೆಯಲ್ಲೂ ಕೂಡ ನೀರು ಬತ್ತಿ ಹೋಗುವುದಿಲ್ಲ. ಈಶ್ವರ ದೇವಾಲಯದ ಎಡಭಾಗದಲ್ಲಿ ತುಳಸಿ ಕಟ್ಟೆಯನ್ನು ನಿರ್ಮಿಸಲಾಗಿದೆ. ಆದರೆ ರೀತಿ ದೇವಾಲಯದ ಬಲಭಾಗದಲ್ಲಿ ಪೂರ್ವ ಪಶ್ಚಿಮವಾಗಿ ೭೪ ಮೀಟರ್ ಹೊಂದಿದೆ. ಇದರ ಆಳ ಸುಮಾರು ೮೦ ಮೀಟರ್ ಇರಬಹುದು. ಉತ್ತರಕ್ಕೆ ಹೋದಂತೆ ದೊಣೆಯು ಕಿರಿದಾದ ವ್ಯಾಸ ಹೊಂದಿದ್ದು, ದಕ್ಷಿಣಕ್ಕೆ ಬಂದ ಹಾಗೆ ವ್ಯಾಸ ವಿಶಾಲವಾಗುತ್ತಾ ಹೋಗುತ್ತದೆ. ಒಂದು ರೀತಿಯಲ್ಲಿ ಇದರ ರಚನೆ ಶ್ರೀಲಂಕ ದ್ವೀಪದ ಆಕಾರದಲ್ಲಿ ಕಂಡು ಬರುತ್ತದೆ. ಪೂರ್ವ ಪಶ್ಚಿಮ

ಹಾಗು ಉತ್ತರಕ್ಕೆ ಯಾವುದೇ ರೀತಿಯ ಗೋಡೆಗಳನ್ನು ಕಟ್ಟಲಾಗಿಲ್ಲ. ಬದಲಾಗಿ ಸ್ವಾಭಾವಿಕ ಬಂಡೆಯೇ ಇದೆ. ದಕ್ಷಿಣಕ್ಕೆ ನೀರನ್ನು ತಡೆ ಹಿಡಿಯುವ ಸಲುವಾಗಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ ೧೧ ಅಡಿ ಎತ್ತರದ ಗೋಡೆಯನ್ನು ದಕ್ಷಿಣ ಭಾಗದಲ್ಲಿ ನಿರ್ಮಿಸಿ ನೀರನ್ನು ತಡೆ ಹಿಡಿಯಲಾಗಿದೆ.

**ಕುಮ್ಮಿ ದೊಣೆ**

ಚನ್ನರಾಯನ ದುರ್ಗದ ಕೋಟೆಯ ೧೧ ನೇ ಬಾಗಿಲಿನ ಮೂಲಕ ಕೋಟೆಯ ಕೊನೆಯ ಹಂತವನ್ನು ತಲುಪಿದರೆ ಅಲ್ಲಿ ಕುಮ್ಮಿ ದೊಣೆ ಕಂಡು ಬರುತ್ತದೆ.ಇದು ಈ ದುರ್ಗದ ಕೊನೆ ಹಂತವಾಗಿದೆ. ಇಲ್ಲಿ ಪಾಳೆಗಾರನು ತನ್ನ ಕುಟುಂಬದ ರಕ್ಷಣೆಯನ್ನು ಪಡೆಯಲು ಕುಟುಂಬದ ಸದಸ್ಯರೆಲ್ಲರೂ ಕೊನೆಯ ಮೂರನೇ ಸುತ್ತಿನ ಕೋಟೆಯಲ್ಲಿ ವಾಸಿಸುತ್ತಿದ್ದರು. ಈ ದೊಣೆಯು ೬ ಅಡಿ ಆಳವಿದ್ದು ಗಾರೆ ಮತ್ತು ಇಟ್ಟಿಗೆಯಿಂದ ಕಟ್ಟಲಾಗಿದೆ. ಇಲ್ಲಿ ಬೇಸಿಗೆಯ ಕಾಲದಲ್ಲಿ ನೀರು ಬತ್ತಿ ಹೋಗುತ್ತವೆ. ಈ ದೊಣೆಯಲ್ಲಿನ ನೀರನ್ನು ಅರಮನೆಯ ನಿತ್ಯ ಕಾರ್ಯ ಚಟುವಟಿಕೆಗಳಿಗೆ ಬಳಸಲಾಗುತ್ತಿರಬಹುದು ಎಂದು ತಿಳಿದು ಬರುತ್ತದೆ. ಕಾರಣ ಅಲ್ಲಿ ಯಾವುದೇ ರೀತಿಯ ನೀರಿನ ಶೇಖರಣಾ ವ್ಯವಸ್ಥೆ ಇಲ್ಲವಾದ್ದರಿಂದ ಆ ದೊಣೆಯ ನೀರನ್ನು ಬಳಸುತ್ತಿರಬೇಕು.

**ಅರಮನೆ ಆವರಣದ ದೊಣೆ**

ಇದು ೨ ನೇ ಕೋಟೆಯನ್ನು ಪ್ರವೇಶಿಸಿದರೆ ಅರಮನೆಯ ದಕ್ಷಿಣ ಭಾಗಕ್ಕೆ ಹಾಗು ತುಪ್ಪದ ಕಣಜದ ಉತ್ತರ ಭಾಗದ ಮಧ್ಯದಲ್ಲಿ ಕಂಡುಬರುವುದೇ ಅರಮನೆ ಆವರಣದ ದೊಣೆ. ಇದಕ್ಕೆ ಯಾವುದೇ ರೀತಿಯ ಗಾರೆಯನ್ನು ಬಳಸದೆ. ಸ್ವಾಭಾವಿಕ ರೀತಿಯಲ್ಲಿದೆ. ಈ ದೊಣೆಯು ಪೂರ್ವ ಪಶ್ಚಿಮವಾಗಿ ೮ ಅಡಿ ಉತ್ತರ ದಕ್ಷಿಣವಾಗಿ ೬ ಅಡಿಯಿದ್ದು ಅದರ ಆಳ ೪೯ ಅಡಿಯಾಗಿದೆ. ಇದರ ಒಳಗೆ ಇಳಿಯಲು ಎರಡು ಮೆಟ್ಟಿಲುಗಳ ರೂಪದಲ್ಲಿ ಕಲ್ಲನ್ನು ಜೋಡಿಸಲಾಗಿದೆ. ಇದರ ರಚನೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಇದು ಈಜು ಕೊಳ ಇರಬಹುದಾಗಿದೆ.

**ಬೂದಿಗವಿ ದೊಣೆ**

ಇದು ಸಿದ್ದರ ಬೆಟ್ಟದ ಮೇಲ್ಭಾಗದಲ್ಲಿ ಸಿದ್ದೇಶ್ವರ ಸ್ವಾಮಿಯ ಗದ್ದುಗೆಯ ಎದುರಿಗೆ ಕಂಡು ಬರುವ ದೊಣೆಯಾಗಿದೆ. ಈ ಸ್ಥಳವನ್ನು ಸುವರ್ಣಮುಖಿ ನದಿಯ ಉಗಮ ಸ್ಥಾನವೆಂದು ಕರೆಯುವರು. ಈ ಪುಣ್ಯ ಕ್ಷೇತ್ರಕ್ಕೆ ಬರುವ ಭಕ್ತರು ಸ್ವಾಮಿಯ ದರ್ಶನಕ್ಕೆ ಹೋಗುವ ಮುನ್ನ ಈ ಜಲದಿಂದ ಸ್ನಾನ ಮಾಡಿ ಮುಂದೆ ಸಾಗುತ್ತದೆ. ಬೇಸಿಗೆ ಕಾಲದಲ್ಲಿಯೂ ಸಹಾ ನೀರಿನ ಪ್ರಮಾಣ ಅಷ್ಟೇ ಇರುತ್ತದೆ. ಇದರ ವಿಸ್ತೀರ್ಣವು

ಮೂರು ಅಡಿ ಉದ್ದ ೨ ಅಡಿ ಅಗಲ ೩ ರಿಂದ ೪ ಅಡಿ ಆಳ ಹೊಂದಿರುವುದನ್ನು ಕಾಣಬಹುದಾಗಿದೆ. ಇದು ಸಿದ್ದರ ಬೆಟ್ಟದ ಕೊನೆಯಲ್ಲಿ ಕಂಡು ಬರುತ್ತದೆ. ಇದರ ಹಿಂಭಾಗಕ್ಕೆ ಹೋದರೆ ಮಹಾನಾಡ ಪ್ರಭು ಚಿಕ್ಕಪ್ಪಗೌಡನ ಸೇನಾನಿಯಾದ ಕುರಂಗರಾಯ ನಿರ್ಮಿಸಿದ ಅಲಸಂದೆ ಕೆರೆ ಕಂಡು ಬರುತ್ತದೆ.[೯೬]

**ಬಾವಿಗಳು**

ಕೊರಟಗೆರೆ ಪರಿಸರವು ಅಲ್ಪಾವಧಿಯ ಮುಂಗಾರು ಮಾನ್‌ಸೂನ್ ಮಳೆಯ ಮೇಲೆ ಅವಲಂಬಿತವಾಗಿದೆ ಇಲ್ಲಿ ಯಾವಾಗಲೂ ಹರಿಯುವ ಜೀವಂತ ನದಿಗಳು ಈ ಭಾಗದಲ್ಲಿಲ್ಲ. ಮಳೆಗಾಲದಲ್ಲಿ ಮಾತ್ರ ಸುವರ್ಣಮುಖಿ ನದಿಯು ಹರಿಯುತ್ತದೆ. ಕೆರೆಗಳೇ ನೀರಿನ ಆಧಾರವಾದ್ದರಿಂದ, ಅವುಗಳು ಕೂಡ ಮಳೆ ಸರಿಯಾಗಿ ಬಂದಾಗ ಮಾತ್ರ ತುಂಬುವುದು. ಆದ್ದರಿಂದ ಅಂದಿನ ಕೃಷಿಕರು ಅನಿವಾರ್ಯವಾಗಿ ಅಂತರ್ಜಲ ಮೂಲಗಳನ್ನು ಅವಲಂಭಿಸಬೇಕಾಯಿತು. ಆದ್ದರಿಂದ ಬಾವಿಯನ್ನು ತೆಗೆದು ಬೇಸಾಯಕ್ಕೆ ಬಳಸಿಕೊಂಡರು ಹೀಗೆ ತೆಗೆಯಲಾದ ಬಾವಿಗಳಿಂದ ಅಂತರ್ಜಲ ಸದಾ ದೊರಕುತ್ತಿದ್ದು, ಆದ್ದರಿಂದ ಬಾವಿ ನೀರಾವರಿಯ ಕಾರ್ಯ ಇಲ್ಲಿನ ಕೃಷಿಕರಿಗೆ ಸಾಧ್ಯವಾಯಿತು. ಬಾವಿಗಳು ಹೆಚ್ಚಿನ ಪ್ರದೇಶಕ್ಕೆ ನೀರುಣಿಸುವ ಸಾಮರ್ಥ್ಯ ಹೊಂದಿರುತ್ತಿರಲಿಲ್ಲ. ಬಾವಿಗಳು ನೀರಾವರಿ ಕಾರ್ಯಕ್ಕಲ್ಲದೆ ಸಾಮಾಜಿಕ ಮತ್ತು ಧಾರ್ಮಿಕವಾಗಿ, ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಅಲ್ಲದೆ ದೇವಾಲಯಗಳ ಮತ್ತು ದೇವರುಗಳ ಕಾರ್ಯಗಳಿಗೆಂದು ಬಾವಿಗಳನ್ನು ನಿರ್ಮಿಸಲಾಗುತ್ತಿದ್ದು, ಅನೇಕ ಶುಭ ಕಾರ್ಯಗಳಿಗೆ ಜನರು ಬಾವಿಗಳನ್ನು ಅವಲಂಭಿಸುತ್ತಿದ್ದರು. ವಿಜಯನಗರದ ಒಂದು ಶಾಸನವು ಬಾವಿಗಳನ್ನು ಕಟ್ಟಿಸುವುದು ಒಂದು ಪುಣ್ಯದ ಕೆಲಸ ಎಂದು ತಿಳಿಸಿದೆ. ನೀರಾವರಿಗೆಂದೇ ನಿರ್ಮಿಸಿದ ಬಾವಿಗಳು ಊರಿನಿಂದ ಹೊರಗಡೆಯ ಪ್ರದೇಶಗಳಾದ ಹೊಲ, ತೋಟ, ಗದ್ದೆಗಳಲ್ಲಿರುತ್ತಿದ್ದವು. ಆದರೆ ಜನರಿಗೆ ಕುಡಿಯಲು ಹಾಗು ಧಾರ್ಮಿಕ ಕಾರ್ಯಗಳಿಗೆಂದೇ ತೆರೆದಿರುವ ಬಾವಿಗಳು ಜನವಸತಿಯ ಪ್ರದೇಶದಲ್ಲಿರುತ್ತಿದ್ದವು. ಇಂತಹ ಅನೇಕ ಪ್ರದೇಶಗಳಲ್ಲಿ ಬಾವಿ ಹಾಗು ಪುಷ್ಕರಣಿಗಳನ್ನು ನಾವು ನೋಡಿದ್ದೇವೆ. ಶಾಸನಗಳಲ್ಲಿ ವಿಜಯನಗರದ ಅರಸರು ಬಾವಿಗಳನ್ನು ಹಾಗು ಪುಷ್ಕರಣಿ ತೋಡಿಸಿರುವ ಅನೇಕ ನಿದರ್ಶನಗಳನ್ನು ನಾವು ಕಾಣಬಹುದಾಗಿದೆ.

ಹೊಳವನಹಳ್ಳಿಯ ಪಾಳೆಗಾರರ ಕಾಲದಲ್ಲೂ ಸಹ ಅನೇಕ ಬಾವಿಗಳನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಕೊರಟಗೆರೆ ನಗರದ ವೆಂಕಟರಮಣ ದೇವಾಲಯದ ಎಡಭಾಗದಲ್ಲಿರುವ, ಹುಚ್ಚಾವದೂತರ ಆಶ್ರಮದ ಆವರಣದಲ್ಲಿ ಬಾವಿ ನಿರ್ಮಿಸಲಾಗಿದೆ. ಇದು ಪಾಳೆಗಾರರ ಕಾಲದಲ್ಲಿ ಆಶ್ರಮದ ಕಾರ್ಯಗಳಿಗೆಂದೇ ನಿರ್ಮಿಸಲಾಗಿದೆ. ಈ ಬಾವಿಯ ಮೇಲ್ಬಾಗದಲ್ಲಿ ಚೌಕಕಾರದಲ್ಲಿ ನಿರ್ಮಿಸಿದ್ದು , ಒಳಭಾಗದಲ್ಲಿ ವೃತ್ತಾಕಾರದಲ್ಲಿ ತೋಡಿ ಸುತ್ತಲು ಮಣ್ಣು ಬೀಳದ ಹಾಗೆ ಕಲ್ಲಿನ ಕಟ್ಟಡ ಕಟ್ಟಲಾಗಿದೆ. ಈ

ಬಾವಿಯ ಮೇಲ್ಭಾಗ ಕಲ್ಲು ಕಂಬಗಳನ್ನು ಎಡಭಾಗದಲ್ಲಿ ನಿಲ್ಲಿಸಿ ಅವುಗಳ ಮಧ್ಯೆ ಬಂಡೆಗೆ ರಂಧ್ರವನ್ನಿಟ್ಟು ಕಬ್ಬಿಣದ ಗಾಲಿಯನ್ನು ಹಾಕಲಾಗಿದೆ. ಈ ಗಾಲಿಯ ಸಹಾಯದಿಂದ ನೀರನ್ನು ಹೊರಗೆ ತೆಗೆಯಲು ಅನುಕೂಲ ಮಾಡಿಕೊಡಲಾಗಿದೆ. ಈ ಬಾವಿಗೆ ಯಾರು ಪ್ರವೇಶ ಮಾಡಲು ಸಾಧ್ಯವಿಲ್ಲ ಕಾರಣ ಸುತ್ತಲೂ ಗೋಡೆಯನ್ನು ನಿರ್ಮಿಸಲಾಗಿದೆ. ಇದು ಕಿರಿದಾದ ವ್ಯಾಸವನ್ನು ಹೊಂದಿದ್ದು ಆದರೆ ೬ ಅಡಿ ಪೂರ್ವ ಪಶ್ಚಿಮವಾಗಿ ಉತ್ತರ ದಕ್ಷಿಣವಾಗಿ ೪ ಅಡಿ ವ್ಯಾಸವನ್ನು ಒಳಗೊಂಡಿದೆ. ಅದೇ ಕಾಲದಲ್ಲಿ ನಿರ್ಮಾಣವಾದ ವೆಂಕಟರಮಣ ದೇವಾಲಯದ ಆವರಣಲ್ಲಿ ಇರುವ ಬಾವಿಯಲ್ಲಿ ಇಂದಿಗೂ ಕೊರಟಗೆರೆ ಪಟ್ಟಣದ ಜನರು ನೀರನ್ನು ತೆಗೆದುಕೊಂಡು ಕುಡಿಯಲು ಬಳಸುತ್ತಿದಾದರೆ. ಪಾಳೆಗಾರರ ಕಾಲದಲ್ಲಿ ನೀರಾವರಿಗೂ ಸಹ ಕೆಲವು ಬಾವಿಗಳನ್ನು ನಿರ್ಮಿಸಿದ್ದು ಹೆಚ್ಚಿನವು ಮೇಲ್ಭಾಗದಲ್ಲಿ ಕಲ್ಲಿನಿಂದ ಕಟ್ಟಿರುವುದು ಕಂಡು ಬರುತ್ತದೆ. ಈ ಭಾಗದ ಬಾವಿಗಳನ್ನು ನಾಗರಬಾವಿ, ಕೋನೇರು ಬಾವಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

## ಅಡಿ ಟಿಪ್ಪಣಿ

೧. ಬ್ರಿಟಾನಿಕ ಎನ್‌ಸೈಕ್ಲೋಪಿಡಿಯಾ, ಸಂ.XVII ಪು. 641-642

೨. ವಾಸುದೇವನ್ ಸಿ.ಎಸ್., ೨೦೦೧: ಹಂಪಿ ಪರಿಸರದ ಕೆರೆಗಳು, ಪು. ೬

೩. ಅದೇ. ಪು. ೮

೪. ವಾಸುದೇವನ್ ಸಿ.ಎಸ್. ೨೦೦೧: ಪೂರ್ವೋಕ್ತ, ಪು. ೭

೫. ನಾಗರಾಜರಾವ್ ಎಂ.ಎಸ್. ಪ್ರೋಟೋ ಹಿಸ್ಟಾರಿಕ್ ಕಲ್ಚರ್ಸ್ ಆಫ್ ತುಂಗಭದ್ರಾ, ವ್ಯಾಲಿ ಪು. ೨೩ ಮತ್ತು ೧೨೪

೬. ವಾಸುದೇವನ್ ಸಿ.ಎಸ್. ೨೦೦೧: ಪೂರ್ವೋಕ್ತ , ಪು. ೭

೭. MAR, 1929 : Vol 8, ಪು. 50

೮. ದೀಕ್ಷಿತ್ ಜಿ.ಎಸ್. ಕುಪ್ಪುಸ್ವಾಮಿ. ಆರ್. ಮತ್ತು ಮೋಹನ್ ಎಸ್.ಕೆ., ೨೦೦೦ ಕರ್ನಾಟಕದಲ್ಲಿ ಕೆರೆ ನೀರಾವರಿ ಲೇ. ನೀಲತ್ತಹಳ್ಳಿ,ಕಸ್ತೂರಿ, ಪು.೨೬

೯. ರಮೇಶ್ ನಾಯಕ (ಸಂ), ೨೦೦೭: ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನದ ಮರು ಚಿಂತನೆ, ಲೇ. ವಾಸುದೇವನ್ ಸಿ. ಪಿ. ಪು. ೧೨೬

೧೦. ರಮೇಶ್ ನಾಯಕ್, ೨೦೦೭: ಪೂರ್ವೋಕ್ತ - ಪು. ೧೨೬

೧೧. ರಾಜಾರಾಮ ಹೆಗಡೆ , ೨೦೦೨: ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ ಪು. ೧

೧೨. ಚಿಕ್ಕವೀರಯ್ಯ ವೀ., ೧೯೯೧: ಸಿದ್ದರಬೆಟ್ಟ ಒಂದು ದರ್ಶನ, ಪು.೧೫

೧೩. ಭಾಸ್ಕರಪ್ಪ ಸಿ , ೧೯೮೧: ತುಮಕೂರು ಜಿಲ್ಲಾ ದರ್ಶನ, ಪು. ೩,೪

೧೪. ಅದೇ ಪು. ೪

೧೫. ಅದೇ ಪು. ೪

೧೬. ಚಿಕ್ಕವೀರಯ್ಯ ವೀ., ೧೯೯೧: ಪೂರ್ವೋಕ್ತ , ಪು.೨೨

# ಅಧ್ಯಾಯ-ಏಳು

## ಸಮಾರೋಪ

ಪ್ರಸ್ತುತ ಅಧ್ಯಯನವಾದ ಚನ್ನರಾಯನದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ ಎಂಬ ವಿಷಯದ ಬಗ್ಗೆ ವಿವರವಾದ ಅಧ್ಯಯನಗಳು ಇಲ್ಲಿಯವರೆಗೂ ನಡೆದಿರುವುದು ಕಡಿಮೆ ಎಂದೆನಿಸುತ್ತದೆ. ಆ ನಿಟ್ಟಿನಲ್ಲಿ ಚನ್ನರಾಯನದುರ್ಗ ಪರಿಸರದ ಇತಿಹಾಸವನ್ನು ವಿವರವಾಗಿ ಹಾಗು ವಿಶ್ಲೇಷಣೀಯವಾಗಿ ಕಾಲಾನುಕ್ರಮಣಿಕೆಯಲ್ಲಿ ಕಟ್ಟಿಕೊಡುವ ಪ್ರಯತ್ನದ ಹಿನ್ನೆಲೆಯಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡು ವಿಷಯ ಸಂಗ್ರಹಿಸಲಾಗಿದೆ. ಇದರ ಅನ್ವಯ ಈ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದ ನೆಲೆಗಳು ಚಾರಿತ್ರಿಕ ಕಾಲದ ದೇವಾಲಯಗಳು ಶಾಸನಗಳು, ಮೂರ್ತಿಶಿಲ್ಪಗಳು ಹಾಗು ಪ್ರಾಚೀನ ಕಾಲದ ಕೆರೆ ಕಟ್ಟೆ, ನದಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಚನ್ನರಾಯನದುರ್ಗ ಪರಿಸರದ ಇತಿಹಾಸವನ್ನು ಸಮಗ್ರವಾಗಿ ಬಿಂಬಿಸುವ ಪ್ರಯತ್ನದಲ್ಲಿ ಅತಿ ಸೂಕ್ಷ್ಮ ಸಂಗತಿಗಳನ್ನು ಅರಿಯುವ ಕಾರ್ಯ ಮಾಡಲಾಗಿದೆ.ಈ ಪರಿಸರವು ಪ್ರಾಚೀನ ಮಾನವನಿಂದ ಮೊದಲ್ಗೊಂಡು ಇಂದಿನ ಮಾನವನ ಕಾರ್ಯವೈಖರಿಯವರೆಗೂ ತನ್ನ ಪ್ರಭಾವವನ್ನು ಬೀರುತ್ತಿದೆ ಎಂಬ ಅಂಶ ಈ ಪರಿಸರದ ಅಧ್ಯಯನದಿಂದ ತಿಳಿಯಬಹುದಾಗಿದೆ.

''ಚನ್ನರಾಯನದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ'' ಎಂಬ ಅಧ್ಯಯನದ ವಿಷಯವನ್ನು ಆಯ್ದುಕೊಂಡು ವಿವರವಾಗಿ ಇದಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ. ಈ ಪರಿಸರದಲ್ಲಿ ಪ್ರಾಗಿತಿಹಾಸಕ್ಕೆ ಸಂಬಂಧಿಸಿದಂತೆ ಹಳೆ ಶಿಲಾಯುಗದಿಂದ ಇತಿಹಾಸ ಆರಂಭದ ಕಾಲದವರೆಗಿನ ನೆಲೆಗಳನ್ನು ಇಲ್ಲಿ ಕಾಣಬಹುದಾಗಿದೆ. ಇದಕ್ಕೆ ಸಂಬಂಧಿಸಿದಂತೆ ನೂತನ ಶಿಲಾಯುಗದ ಎರಡು ಹೊಸ ನೆಲೆಗಳನ್ನು ಗುರುತಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಹಾಗು ನೂತನ ಶಿಲಾಯುಗಕ್ಕೆ ಸಂಬಂಧಿಸಿದ ಆಯುಧಗಳು, ಮಡಿಕೆಚೂರುಗಳನ್ನು ಸಂಗ್ರಹಿಸಲಾಗಿದೆ. ಇಂತಹ ಪ್ರಾಚೀನ ನೆಲೆಗಳಲ್ಲಿ ಇಂದಿನ ಮಾನವನು ತನ್ನ ಸ್ವಾರ್ಥಕ್ಕಾಗಿ ಈ ನೆಲೆಗಳನ್ನು ನಾಶ ಮಾಡುತ್ತಿದ್ದಾನೆ. ಅದೇ ರೀತಿಯಾಗಿ ಈ ಪರಿಸರಕ್ಕೆ ಸಂಬಂಧಿಸಿದಂತೆ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಗೋರಿಗಳು, ಕಬ್ಬಿಣದ ಕಿಟ್ಟ ಮತ್ತು ಸಮಾಧಿಗಳನ್ನು ಕಾಣಬಹುದಾಗಿದೆ. ಅದೇ ರೀತಿಯಲ್ಲಿ ಅಧ್ಯಯನವನ್ನು ಮುಂದುವರೆಸಿ ಚಾರಿತ್ರಿಕ ಘಟ್ಟಕ್ಕೆ ಕೊಂಡೊಯ್ಯುವುದಾದರೆ ಈ ಪರಿಸರದಲ್ಲಿ ಗಂಗರು, ಚಾಲುಕ್ಯರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು, ಹೈದರಾಲಿ, ಟಿಪ್ಪುಸುಲ್ತಾನ್, ಮಧುಗಿರಿ ನಾಡ ಪ್ರಭುಗಳು ಹೊಳವನಹಳ್ಳಿಯ ಪಾಳೆಯಗಾರರು ಆಳ್ವಿಕೆ ನಡೆಸಿದ್ದು ಕಂಡು ಬರುತ್ತದೆ. ಇವರ ಆಳ್ವಿಕೆಯ ಸಂದರ್ಭದಲ್ಲಿ ದೇವಾಲಯಗಳು, ಶಾಸನಗಳು, ಕೋಟೆ, ಕೊತ್ತಲಗಳು, ಕೆರೆ ಕಟ್ಟೆಗಳನ್ನು ನಿರ್ಮಿಸಿದ್ದು, ಅವುಗಳ ಸಹಾಯದಿಂದ ವಿವರಣಾತ್ಮಕ

ಇತಿಹಾಸ ರಚಿಸಲು ಸಹಾಯಕವಾಗಿದೆ ಎಂದರೆ ತಪ್ಪಾಗಲಾರದು.

ಚನ್ನರಾಯನದುರ್ಗ ಪರಿಸರದಲ್ಲಿ ಸಿಕ್ಕಿರುವ ಶಾಸನಗಳ ಪ್ರಮಾಣ ಬಹಳ ವಿರಳ ಆದರೂ ಸಹ ಅಧ್ಯಯನದ ದೃಷ್ಟಿಯಿಂದ ಶಾಸನಗಳನ್ನು ಶಿಲಾ ಶಾಸನ , ತಾಮ್ರ ಶಾಸನ, ತಾಳ ಪತ್ರ ಶಾಸನ, ವೀರಗಲ್ಲು, ಮಾಸ್ತಿಗಲ್ಲುಗಳೆಂದು ವಿಭಾಗಿಸಲಾಗಿದೆ. ಇಲ್ಲಿನ ಶಾಸನಗಳು ಸಾಮಾಜಿಕ, ಧಾರ್ಮಿಕ, ಅಡಳಿತಾತ್ಮಕ ಅಂಶಗಳನ್ನು ತಿಳಿಸುತ್ತವೆ. ತುಂಬಾಡಿಯಲ್ಲಿ ದೊರೆತ ಶಾಸನವು ಗಂಗರ ಕಾಲಕ್ಕೆ ಸಂಬಂಧಿಸಿದ್ದು, ಪ್ರಾಚೀನ ಶಾಸನವಾಗಿದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ೧೬ ನೇ ಶತಮಾನಕ್ಕೆ ಸಂಬಂಧಿಸಿದ ಶಾಸನವನ್ನು ಪತ್ತೆ ಹಚ್ಚಲಾಗಿದೆ. ಇಲ್ಲಿನ ಶಾಸನಗಳು ಕನ್ನಡ , ಮರಾಠಿ, ಸಂಸ್ಕೃತ ಭಾಷೆಗಳನ್ನೊಳಗೊಂಡಿವೆ. ಈ ಪರಿಸರದ ಸುತ್ತ ಮುತ್ತ ಹೆಚ್ಚಿನ ಪ್ರಮಾಣದಲ್ಲಿ ವೀರಗಲ್ಲುಗಳು ಹಾಗು ಮಾಸ್ತಿ ಗಲ್ಲುಗಳು ದೊರೆತಿದ್ದು , ಅಂದಿನ ಸಮಾಜದ ಸ್ಥಿತಿ ಗತಿಗಳ ಬಗ್ಗೆ ಬೆಳಕುಚಲ್ಲುತ್ತವೆ. ಅಲ್ಲದೆ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಚೋಳರ ಉಲ್ಲೇಖವಿರುವ ಶಾಸನವು ದೊರೆತಿದೆ.

ಈ ಶಾಸನಕ್ಕೆ ಸಂಬಂಧಿಸಿದಂತೆ ಅಂದಿನ ಕಾಲದಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿಲ್ಲವೆಂದೇಳಬಹುದು. ಇಲ್ಲಿನ ದೇವಾಲಯಗಳು ಗಂಗ,ಚೋಳ ಪಾಳೆಗಾರರ ಕಾಲದಲ್ಲಿ ನಿರ್ಮಾಣಗೊಂಡವುಗಳಾಗಿವೆ. ಈ ದೇವಾಲಯಗಳ ರಚನೆ ವಾಸ್ತು ಶೈಲಿಯನ್ನು ವಿವರವಾಗಿ ತಿಳಿಸಲಾಗಿದೆ. ಇನ್ನು ಮೂರ್ತಿ ಶಿಲ್ಪಗಳ ಬಗ್ಗೆ ಹೇಳುವುದಾದರೆ, ಹೆಚ್ಚಿನ ಪ್ರಮಾಣದಲ್ಲಿ ಶಿಲಾ ಶಿಲ್ಪಗಳೇ ದೊರೆತಿದ್ದು ಗಾರೆ ಶಿಲ್ಪಗಳನ್ನು ಪಾಳೆಗಾರರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ಮಾತ್ರ ಕಾಣಬಹುದಾಗಿದೆ. ಸಾಮಾನ್ಯವಾಗಿ ಮಾನವನಿಗೆ ರಕ್ಷಣೆ ಎಂಬುದು ಮುಖ್ಯವಾದದ್ದು ಈ ಹಿನ್ನೆಲೆಯಲ್ಲಿ ರಕ್ಷಣೆ ಎಂಬ ಮಾತ್ರಕ್ಕೆ ಕೋಟೆಗಳಷ್ಟೆ ಮುಖ್ಯವಲ್ಲ. ಅಂದಿನ ಮಾನವನು ಆಹಾರ ಸಂಗ್ರಹಿಸಲು ನಿರ್ಮಿಸಿದ್ದ ಕಣಜಗಳು ಸೇರುತ್ತವೆ. ಕೋಟೆಗಳ ಒಳಭಾಗದಲ್ಲಿ ಅರಮನೆ, ಮದ್ದಿನ ಮನೆ, ಗರಡಿ ಮನೆಗಳು ಸಹ ಮುಖ್ಯವಾಗಿರುತ್ತವೆ. ಚನ್ನರಾಯನದುರ್ಗ ಪರಿಸರದಲ್ಲಿ ಸುಭದ್ರವಾದ ಕೋಟೆಗಳನ್ನು ಇಂದಿಗೂ ಕಾಣಬಹುದಾಗಿದೆ. ಅಂತಹ ಕೋಟೆಗಳ ರಚನೆ, ಬುರುಜು, ಬತೇರಿಗಳು, ಕೋಟೆಯೊಳಗಿನ ಸ್ಮಾರಕಗಳಾದ ತುಪ್ಪದ ಕಣಜ, ಈಜುಕೊಳ, ಮುಸರೆದೊಣೆಗಳ ಬಗ್ಗೆ ಸಮಗ್ರವಾಗಿ ವಿವರಿಸಲಾಗಿದೆ.

ಈ ಪರಿಸರದ ಭಾಗವು ಅಲ್ಲಲ್ಲಿ ಬೆಟ್ಟ ಗುಡ್ಡಗಳಿಂದ ಆವೃತ್ತವಾದ ಬಯಲು ಪ್ರದೇಶವಾಗಿದೆ. ಅಲ್ಲದೆ ಈ ಪರಿಸರದಲ್ಲಿ ಎರಡು ನದಿಗಳು ಹಾದು ಹೋಗುತ್ತವೆ. ಆದರೆ ವಿಪರ್ಯಾಸವೆಂದರೆ ಮಳೆಗಾಲದಲ್ಲಿ ಮಾತ್ರ ಈ ನದಿಗಳು ಹರಿಯುತ್ತವೆ. ಈ ಪರಿಸರದಲ್ಲಿ ಆಳ್ವಿಕೆ ನಡೆಸಿದ ಅರಸರು ಅನೇಕ ಕೆರೆ ಕಟ್ಟೆಗಳನ್ನು ನಿರ್ಮಿಸಿ, ಕೃಷಿಗೆ ಸಹಾಯಕವಾಗುವಂತೆ ಮಾಡಿದ್ದಾರೆ. ಇಂತಹ ಪ್ರಾಚೀನ ಕೆರೆಗಳು ಇಂದಿಗೂ ನೀರಿನ ಆಸರೆಯಾಗಿ ಕಾರ್ಯ ನಿರ್ವಹಿಸುತ್ತಿವೆ. ಕೆರೆಗಳ ಜೊತೆಗೆ ಪ್ರಾಚೀನ ಬಾವಿಗಳು, ಪ್ರಾಕೃತಿಕ ನೀರಿನ ಆಸರೆಗಳಿದ್ದು ಅವುಗಳ ಪ್ರಾಮುಖ್ಯತೆಯನ್ನು ಅಧ್ಯಯನದಲ್ಲಿ ವಿವರಿಸಲಾಗಿದೆ.

ಪ್ರಸ್ತುತ ಚನ್ನರಾಯನದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ ಎಂಬ ಅಧ್ಯಯನದಲ್ಲಿ ಕೆಲವಾರು ಫಲಿತಗಳು ಹೊರಬಿದ್ದವು. ಅಂತಹವುಗಳಲ್ಲಿ ವಿಶೇಷವಾಗಿ ನೂತನ ಶಿಲಾಯುಗಕ್ಕೆ ಸಂಬಂಧಿಸಿದಂತೆ ಬುಕ್ಕಾಪಟ್ಟಣ, ಮತ್ತು ಕುರಂಕೋಟೆ ಎಂಬ ಎರಡು ಹೊಸ ನೆಲೆಗಳನ್ನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈ ಗ್ರಾಮಗಳಲ್ಲಿ ಶಿಲಾ ಕೈಗೊಡಲಿ ಹಾಗೂ ಕೆಂಪು ಬಣ್ಣದ ಮಡಕೆಗಳು ದೊರೆತಿದ್ದು, ನೂತನ ಶಿಲಾಯುಗದ ಲಕ್ಷಣಗಳಿಗೆ ಹೋಲಿಕೆಯಾಗುತ್ತದೆ. ಕೈಗೊಡಲಿಯು ೮ ಸೆಂ.ಮೀ ಉದ್ದ ಹೊಂದಿದ್ದು ನಯವಾಗಿ ಉಜ್ಜಲಾಗಿದೆ. ಈ ಆಯುಧವನ್ನು ಪ್ರಾಣಿಗಳನ್ನು ಬೇಟೆಯಾಡಲು ಮತ್ತು ಚರ್ಮ ಸುಲಿಯಲು ಬಳಸುತ್ತಿದ್ದಾರೆಂದು ಊಹಿಸಲಾಗಿದೆ. ಇನ್ನೂ ಇತಿಹಾಸಕಾಲಕ್ಕೆ ಸಂಬಂಧಿಸಿದಂತೆ ರಾಜರ ಹಾಗೂ ಪಾಳೆಗಾರರ ಕಾಲದ ಆಡಳಿತವನ್ನು ಕಾಲಾನುಕ್ರಮದಲ್ಲಿ ವ್ಯವಸ್ಥಿತವಾಗಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

ಈ ಪರಿಸರದಲ್ಲಿ ದೊರೆತಿರುವ ಶಾಸನಗಳನ್ನು ಶಿಲಾ ಶಾಸನ , ತಾಮ್ರ ಶಾಸನ, ತಾಳ ಪತ್ರ, ವೀರಗಲ್ಲು, ಮಾಸ್ತಿಗಲ್ಲುಗಳೆಂದು ವಿಭಾಗಿಸಲಾಗಿದ್ದು, ಶಾಸನಗಳಿಗೆ ಸಂಬಂಧಿಸಿದಂತೆ ಈ ಹಿಂದೆ ಅಧ್ಯಯನಗಳು ನಡೆದಿದ್ದರೂ ಸಹ ವ್ಯವಸ್ಥಿವಾಗಿ ಹಾಗೂ ಕ್ರಮ ಬದ್ಧವಾಗಿ ಅಧ್ಯಯನದಲ್ಲಿ ಬಳಸಿಕೊಂಡಿರಲಿಲ್ಲ ಇಂಥಹ ಕೊರತೆಯನ್ನು ನೀಗಿಸುವ ಪ್ರಯತ್ನ ಈ ಸಂಪ್ರಬಂಧದಲ್ಲಿ ಮಾಡಲಾಗಿದೆ. ಅಲ್ಲದೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನೇಗಲಾಲ ಗ್ರಾಮದ ಕಾವಲಮ್ಮ ದೇವಾಲಯದ ಎದುರಿನ ಉಯ್ಯಾಲೆ ಮಂಟಪದ ಕಂಬದಲ್ಲಿ ಬರೆದ ಶಾಸನವನ್ನು ಗುರ್ತಿಸಲಾಗಿದೆ. ಇದರ ಲಿಪಿ ಹಾಗೂ ಭಾಷೆ ಕನ್ನಡವಾಗಿದ್ದು , ನೇ.. ದಾ.. .ಮರೋಸನಪ್ಪ ಎಂದು ಕೆತ್ತಲಾಗಿದೆ. ಬಹುಶಃ ಉಯ್ಯಾಲೆ ಕಂಬವನ್ನು ಸ್ಥಾಪನೆ ಮಾಡಿದವನ ಹೆಸರಾಗಿದೆ ಎಂದು ಊಹಿಸಲಾಗಿದೆ. ಅಲ್ಲದೆ ಬಂಡೇಹಳ್ಳಿಯ ಬಳಿ ಸುಮಾರು ೧೬ ನೇ ಶತಮಾನಕ್ಕೆ ಸೇರಿದ ಕನ್ನಡ ಲಿಪಿ ಹಾಗೂ ಭಾಷೆಯನ್ನೊಳಗೊಂಡ ಶಾಸನವನ್ನು ಪತ್ತೆ ಹಚ್ಚಲಾಗಿದೆ. ಇದು ಸ್ವಾಭಾವಿಕ ಬಂಡೆಯ ಮೇಲೆ ಕೆತ್ತಲಾಗಿದ್ದು , "ಸ್ವಸ್ತಿಶ್ರೀ ಪರಿದಾವಿ ಸಂವತ್ಸದ ೧೭೩೩ ಶಕ ವರ್ಷಂಗಳ್" ಎಂದು ಪ್ರಾರಂಭವಾಗಿ ಎಂಟು ಸಾಲುಗಳನ್ನು ಒಳಗೊಂಡಿದೆ. ಈ ಶಾಸನವನ್ನು ಕುರಿತು ಗಂಭೀರ ಅಧ್ಯಯನಗಳು ನಡೆಯಬೇಕಾಗಿದೆ ಹಾಗೂ ಹೊಲತಾಳು ಎಂಬ ಗ್ರಾಮದ ಬ್ಯಂಗೇಶ್ ಎಂಬುವರ ಮನೆಯಲ್ಲಿ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಅಪ್ರಕಟಿತ ತಾಳ ಪತ್ರ ದೊರೆತಿದೆ. ಇದು ೪೮ ಪತ್ರಗಳನ್ನು ಒಳಗೊಂಡಿದ್ದು ಪ್ರತಿ ಪತ್ರದಲ್ಲಿ ೪+೪ ಸಾಲುಗಳನ್ನು ಒಳಗೊಂಡಿದೆ.

ಈ ಪತ್ರವು ಚೋಳರ ಕಾಲದ ಬಗ್ಗೆ ಮಾಹಿತಿಯನ್ನು ನೀಡುತ್ತಿದ್ದು , ಕರಿಕಾಳ ಚೋಳ, ರಾಜ ರಾಜೇಂದ್ರಚೋಳ, ಬಲ್ಲಾಳರ ಹೆಸರನ್ನು ಉಲ್ಲೇಖಿಸುತ್ತದೆ ಹಾಗೆ ಅಂದಿನ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಜಾತ್ರೆ, ಉತ್ಸವ, ವೇಶ್ಯಾಪದ್ದತಿಯ ಬಗ್ಗೆ ಮಾಹಿತಿ ನೀಡುತ್ತದೆ. ಇದರ ಪ್ರಕಾರ ಈ ಪ್ರದೇಶವು ಚೋಳರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯಬಹುದಾಗಿದೆ.

ದೇವಾಲಯಗಳ ವಾಸ್ತು ಶಿಲ್ಪದ ಬಗ್ಗೆ ಈ ಪರಿಸರದಲ್ಲಿ ಅಧ್ಯಯನಗಳು ನಡೆದಿಲ್ಲವೆನ್ನಬಹುದು. ಇಂತಹ ಕೊರತೆಯನ್ನು ನೀಗಿಸುವ ಪ್ರಯತ್ನ ಈ ಸಂಪ್ರಬಂಧದಲ್ಲಿ ಮಾಡಲು ಪ್ರಯತ್ನಿಸಲಾಗಿದೆ. ಬಂಡೇ ಹಳ್ಳಿ ಗ್ರಾಮದ ಬಳಿ ಕಲ್ಲಾಸರೆಯಿಂದ ಕೂಡಿದ ಗಂಗಾಧರೇಶ್ವರ ಗವಿಯ ಒಳಭಾಗದಲ್ಲಿದ್ದ ಅನೇಕ ಶಿಲ್ಪಗಳನ್ನು ಗುರ್ತಿಸಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಇನ್ನು ಶಿಲ್ಪಗಳ ಬಗ್ಗೆ ಹೇಳುವುದಾದರೆ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ೨೦ ಸೆಂ.ಮೀ ಉದ್ದವುಳ್ಳ ಲಕ್ಷ್ಮೀ ವಿಗ್ರಹ ದೊರೆತಿದ್ದು,ಕೆಂಪು ಕಣ ಶಿಲೆಯಿಂದ ಕೂಡಿದೆ. ಶಿಲ್ಪವು ಚತುರ್ಭುಜದಾರಿಯಾಗಿ ಕೊರಳಿಗೆ ಮಾಲೆ, ಕೈ ಕಡಗ , ತೋಳುಬಂಧಿ, ಮೂಗುತಿ, ಕರ್ಣಕುಂಡಲ, ಕೈಬಳೆ, ಧರಿಸಿದಂತೆ ಕೆತ್ತಲಾಗಿದೆ. ಈ ಪರಿಸರದ ಶಿಲ್ಪಗಳನ್ನು ಶಿಲಾ ಶಿಲ್ಪ , ಗಾರೆ ಶಿಲ್ಪ , ಲೋಹ ಶಿಲ್ಪಗಳೆಂದು ವಿಭಾಗಿಸಲಾಗಿದೆ. ಈ ಪರಿಸರದಲ್ಲಿ ವೈಷ್ಣವ ಶಿಲ್ಪಗಳೇ ಹೆಚ್ಚು ಕಂಡುಬಂದಿವೆ. ಕಾರಣ ಇಲ್ಲಿನ ಪಾಳೆಗಾರರು ವಿಜಯನಗರದ ಅರಸರಿಗೆ ಸಾಮಂತರಾಗಿದ್ದರಿಂದ ಅವರ ಮಾರ್ಗವನ್ನು ಅನುಸರಿಸಿರುವುದನ್ನು ಕಾಣಬಹುದಾಗಿದೆ.

ಅದೇ ರೀತಿಯಲ್ಲಿ ಈ ಪರಿಸರವು ಗಿರಿ ದುರ್ಗಗಳಿಗೆ ಸೂಕ್ತವಾದ ಸ್ಥಳವಾಗಿದೆ. ಕಾರಣ ಇಲ್ಲಿ ಎತ್ತರವಾದ ಬೆಟ್ಟಗಳಿದ್ದು ಅದರ ಮೇಲ್ಭಾಗದಲ್ಲಿ ಕೋಟೆಗಳನ್ನು ನಿರ್ಮಿಸುತ್ತಿದ್ದರು. ಶತ್ರುಗಳು ಸುಲಭವಾಗಿ ಆಕ್ರಮಣ ಮಾಡಲು ಸಾಧ್ಯವಾಗುತ್ತಿರಲಿಲ್ಲ ಅಲ್ಲದೆ ಗೆರಿಲ್ಲಾ ಮಾದರಿಯ ಯುದ್ಧ ನೀತಿ ಅನುಸರಿಸಲು ಇಲ್ಲಿನ ಗಿರಿಗಳು ಸಹಾಯಕವಾಗಿವೆ. ಚನ್ನರಾಯನದುರ್ಗ ಪರಿಸರದಲ್ಲಿ ಎತ್ತರವಾದ ಬೆಟ್ಟಗಳಿದ್ದು ಇಲ್ಲಿ ಕೊರಟಗೆರೆ ಕೋಟೆ,ಚನ್ನರಾಯನದುರ್ಗದ ಕೋಟೆ, ಕುರಂಗರಾಯನ ಕೋಟೆಗಳು ಕಂಡು ಬರುತ್ತವೆ. ಇವುಗಳ ಬಗ್ಗೆ ಸಮಗ್ರವಾದ ಮಾಹಿತಿ ನೀಡಲು ಪ್ರಯತ್ನಿಸಲಾಗಿದೆ. ಅಲ್ಲದೆ ಕೋಟೆಯೊಳಗಿನ ಕಣಜ, ಮದ್ದಿನಮನೆ, ಅರಮನೆ ಕಟ್ಟಡಗಳ ಅವಶೇಷಗಳ ಬಗ್ಗೆ ಸಮಗ್ರವಾದ ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕವಾಗಿ ಅದ್ಯಯನ ಕೈಗೊಂಡು ಮಾಹಿತಿಯನ್ನು ನೀಡುವ ಪ್ರಯತ್ನ ಮಾಡಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಚನ್ನರಾಯನದುರ್ಗ ಕೋಟೆಯಲ್ಲಿನ ಭತ್ತದ ಒಟ್ಟಿನ ಅವಶೇಷವನ್ನು ಗುರ್ತಿಸಲಾಗಿದೆ.

ಈ ಪರಿಸರದ ಗಿರಿ ದುರ್ಗಗಳಲ್ಲಿ ಕೆರೆ ಕಟ್ಟೆಗಳಿಗಿಂತಲೂ ಪ್ರಾಕೃತಿಕ ದೋಣೆಗಳೇ ಹೆಚ್ಚು ನೀರಿನ ಆಶ್ರಯ ತಾಣಗಳಾಗಿವೆ. ಕಾರಣ ಕೋಟೆಯ ಒಳಭಾಗದಲ್ಲಿ ಮಳೆ ನೀರನ್ನು ಒಂದು ಕಡೆ ಸಂಗ್ರಹಿಸುವ ಮೂಲಕ ಕೋಟೆಯೊಳಗಿನ ಜನತೆಗೆ ನೀರೊದಗಿಸುತ್ತಿದ್ದವು. ಇಂದಿಗೂ ಸಹ ಪ್ರಾಕೃತಿಕ ದೋಣೆಗಳು ಕೋಟೆಯ ಒಳಭಾಗದಲ್ಲಿದ್ದು ನೀರನ್ನು ಹೊಂದಿವೆ. ಅಲ್ಲದೆ ಪಾಳೆಗಾರರ ಕಾಲದಲ್ಲಿ ನೀರಿನ ಆಸರೆಯಾಗಿ ಕೆರೆ ಕಟ್ಟೆಗಳು ಹೆಚ್ಚು ಈ ಭಾಗದಲ್ಲಿ ನಿರ್ಮಿಸಿರುವುದನ್ನು ಕಾಣಬಹುದು. ಈ ಕುರಿತಂತೆ ಸಮಗ್ರ ಅಧ್ಯಯನಗಳು ಈ ಭಾಗದಲ್ಲಿ ನಡೆಯಬೇಕಾಗಿದೆ. ಪ್ರಸ್ತುತ ಸಂಪ್ರಂಬಂಧದಲ್ಲಿ ಪ್ರಾಚೀನ ಕಾಲದಲ್ಲಿಯೇ ನೀರಿನ ವ್ಯವಸ್ಥೆಗೆ ನೀಡಿದ ಪ್ರಾಮುಖ್ಯತೆಯನ್ನು ತಿಳಿಸಲಾಗಿದೆ. ಚನ್ನರಾಯನದುರ್ಗ ಪರಿಸರದ ಇತಿಹಾಸ ಮತ್ತು ಪುರಾತತ್ವ ಎಂಬ ಅಧ್ಯನಯದ ಪ್ರಮುಖ ಉದ್ದೇಶ ಎಂದರೆ ಹಿಂದೆ ಅರಸರ ಆಳ್ವಿಕೆಗೆ ಒಳಪಟ್ಟ ಈ ಪರಿಸರವನ್ನು ಪುನರ್ ಪರಿಶೀಲಿಸುವುದರ ಮೂಲಕ ಈ ಪರಿಸರದ ಸಂರಕ್ಷಣೆಯ ಮೇಲೆ ಬೆಳಕು ಚೆಲ್ಲುವುದಾಗಿದೆ.

# ಗ್ರಂಥಋಣ


೧. ಗೋಪಾಲ್. ಆರ್, (ಸಂ) ೨೦೦೯: ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೨. ಲಕ್ಷ್ಮಣ ಸಿ.ಎಂ., ೨೦೦೦: ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ ದರ್ಶನ ಪ್ರಕಾಶನ, ತುಮಕೂರು.

೩. ಭಾಸ್ಕರಪ್ಪ ಸಿ.ಎನ್ ., ೧೯೮೧ :ತುಮಕೂರು ಜಿಲ್ಲಾ ದರ್ಶನ, ಟೈಮ್ಸ್ ಪಬ್ಲಿಕೇಷನ್, ಬೆಂಗಳೂರು.

೪. ಅ. ಸುಂದರಾ.,೧೯೯೨: ಕರ್ನಾಟಕದ ಪ್ರಾಗಿತಿಹಾಸ,ಐ.ಬಿ. ಎಚ್. ಪ್ರಕಾಶನ, ಗಾಂಧಿನಗರ

೫. ಶಿವತಾರಕ್. ಕೆ.ಬಿ., ೧೯೯೯: ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳ ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿ.ಹೆಚ್‌ಡಿ ಮಹಾ ಪ್ರಬಂಧ

೬. ನರಸಿಂಹಮೂರ್ತಿ ಎಸ್.ಎ., ೨೦೦೪: ನೊಳಂಬ ಇತಿಹಾಸ ದರ್ಶನ, ನೊಳಂಬ ವೀರಶೈವ ಸಂಸ್ಥೆ, ಬೆಂಗಳೂರು

೭. ಷೇಕ್ ಅಲಿ, ಬಿ.,೧೯೯೩: ಕರ್ನಾಟಕ ಚರಿತ್ರೆ, ಸಂಪುಟ-೨, ಮೈಸೂರು ವಿಶ್ವವಿದ್ಯಾಲಯ

೮. ಕಪನಿಪತಿ ಭಟ್ಟ, ೧೯೭೦: ಕರ್ನಾಟಕ ಪರಂಪರೆ , ಮೈಸೂರು ಸರ್ಕಾರ, ಮೈಸೂರು

೯. ಸೂರ್ಯನಾಥ ಕಾಮತ್, ೧೯೯೯ : ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

೧೦. ಶಿವತಾರಕ್ ಕೆ.ಬಿ. ೨೦೦೧: ಕರ್ನಾಟಕದ ಪುರತತ್ವೀಯ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ಹಂಪಿ, ವಿದ್ಯಾರಣ್ಯ

೧೧. ಶಂಕರ ನಾರಾಯಣರಾವ್ , ೨೦೦೩: ಆವತಿಯ ನಾಡ ಪ್ರಭುಗಳು, ಸ್ವಪ್ನ ಬುಕ್ ಹೌಸ್, ಬೆಂಗಳೂರು

೧೨. ಕಲ್ಬುರ್ಗಿ ಎಂ.ಎಂ., ೨೦೦೨: ಮಹಾನಾಡ ಪ್ರಭುಗಳು

೧೩. ತೀತಾಶರ್ಮ ೧೯೯೦ :ಚಾರಿತ್ರಿಕ ದಾಖಲೆಗಳು, ವಿದ್ಯಾನಿಧಿ ಪ್ರಕಾಶನ, ಗದಗ

೧೪. ವಸು. ಎಂ.ವಿ. ೧೯೯೮ :ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ವಿದ್ಯಾನಿಧಿ ಪ್ರಕಾಶನ, ಗದಗ

೧೫. ತಿಪ್ಪೇರುದ್ರಸ್ವಾಮಿ ಎಚ್ , ೧೯೯೮ " ಕರ್ನಾಟಕದ ಸಂಸ್ಕೃತಿ ಸಮೀಕ್ಷೆ", ಡಿ.ವಿ.ಕೆ. ಮೂರ್ತಿ ಪ್ರಕಾಶನ , ಮೈಸೂರು

೧೬. ನಿಂಗಣ್ಣ ಜೆ.ಸಿ., (ಸಂ) ೨೦೦೮: ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಸಿದ್ದಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ

೧೭. ಕೃಷ್ಣ ಕುಮಾರ್ ಸಿ.ಪಿ., ೧೯೯೩: ಶಾಸನ ಶಾಸ್ತ್ರ ಪ್ರವೇಶ,ವಿದ್ಯಾನಿದಿ ಪ್ರಕಾಶನ, ಗದಗ್

೧೮. ಚಿದಾನಂದ ಮೂರ್ತಿಎಂ.,೧೯೬೬: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್ ಹೌಸ್,ಬೆಂಗಳೂರು

೧೯. ಭಗವತಿ ಎಸ್.ಎಸ್., ಮೇಲಿನ ಮನಿ ಹೆಚ್.ಎಸ್., ೨೦೦೪: ಕನ್ನಡ ಶಾಸನಗಳ ಅಧ್ಯಯನ, ವಿದ್ಯಾನಿಧಿ, ಪ್ರಕಾಶನ ,ಗದಗ

೨೦. ರವೀಂದ್ರನಾಥ ಕೆ., ೨೦೦೦: ಕನ್ನಡ ದಾಖಲು ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ಹಂಪಿ

೨೧. ನಾಗಮಣಿ ಪದ್ಮನಾಭ , ೨೦೦೩: ಕೊರಟಗೆರೆ ತಾಲ್ಲೂಕು ದರ್ಶನ ,ಯಶು ಅಭಿ ಪ್ರಕಾಶನ, ಕೊರಟಗೆರೆ

೨೨. ರಾಜಗೋಪಾಲ ಚಾರ್ಯ, ೧೯೯೧: ತಾಡವಾಲೆ ಗ್ರಂಥಸೂಚಿ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ

೨೩. ಶೇಷಶಾಸ್ತ್ರಿ ಆರ್, ೧೯೮೨: ಕರ್ನಾಟಕದ ವೀರಗಲ್ಲುಗಳು, ಕನ್ನಡಸಾಹಿತ್ಯ ಪರಿಷತ್, ಬೆಂಗಳೂರು

೨೪. ಪರಮಶಿವಮೂರ್ತಿ ಡಿ.ವಿ., ೧೯೯೯ : ಕನ್ನಡ ಶಾಸನ ಶಿಲ್ಪ, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ ,ಹಂಪಿ

೨೫. ಗೋಪಾಲರಾವ್, ೨೦೦೯: ಇತಿಹಾಸದ ಇಣುಕು ನೋಟ, ಅಳಿಲುಸೇವಾ ಸಂಸ್ಥೆ, ಬೆಂಗಳೂರು

೨೬. ನಾಗಯ್ಯ ಜಿ.ಎಂ. ೧೯೯೨: ೬ ನೇ ವಿಕ್ರಮಾದಿತ್ಯನ ಶಾಸನಗಳು ಒಂದುಅಧ್ಯಯನ, ವೀರಶೈವ ಅಕಾಡೆಮಿ ಶ್ರೀ ನಾಗನೂರು, ರುದ್ರಾಕ್ಷಿ ಮಠ

೨೭. ವಾಸುದೇವನ್ ಸಿ.ಎಸ್. ೨೦೦೧ : ಹಂಪಿ ಪರಿಸರದ ಕೆರೆಗಳು, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ , ಹಂಪಿ

೨೮. ದೀಕ್ಷಿತ್ ಜಿ.ಎಸ್. ಕುಪ್ಪಸ್ವಾಮಿ ಜಿ.ಆರ್., ೨೦೦೦: ಮೋಹನ್ ಎಸ್.ಕೆ. ಕರ್ನಾಟಕದಲ್ಲಿ ಕೆರೆ ನೀರಾವರಿ, ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗ, ಹಂಪಿ

೨೯. ರಮೇಶ್ ನಾಯಕ್, (ಸಂ) ೨೦೦೩, ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ, ಅಧ್ಯಯನದ ಮರು ಚಿಂತನೆ, ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗ, ಹಂಪಿ, ವಿದ್ಯಾರಣ್ಯ

೩೦. ರಾಜಾರಾಮ ಹೆಗಡೆ , ೨೦೦೨: ಕೆರೆ ನೀರಾವರಿ ನಿರ್ವಹಣೆಯ ಚಾರಿತ್ರಿಕ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೧. ಚಿಕ್ಕವೀರಯ್ಯ ವೀ., ೧೯೯೧ :ಸಿದ್ದರಬೆಟ್ಟ ಒಂದು ದರ್ಶನ, ವಿಮಲ ಪ್ರಿಂಟರ್ಸ್, ತುಮಕೂರು

೩೨. ಕಲ್ಬುರ್ಗಿ ಎಂ.ಎಂ., ಕರ್ನಾಟಕದ ಕೈಪಿಯತ್ತುಗಳು, ೧೯೯೪: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೪. ಕಲ್ಬುರ್ಗಿ ಎಂ.ಎಂ., ೧೯೯೯: ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಭಾಗ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

೩೫. ಕೊಟ್ರಯ್ಯ ಸಿ.ಟಿ.ಎಂ. ೧೯೮೬: ವಿಜಯನಗರದ ನೀರಾವರಿ ವ್ಯವಸ್ಥೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೬. ಕಾಮತ್ ಎಸ್.ಯು., (ಸಂ) ೧೯೯೯: ಕರ್ನಾಟಕ ರಾಜ್ಯ ಗೆಜಿಟಿಯರ್ ಭಾಗ ೩ ಕರ್ನಾಟಕ ರಾಜ್ಯಸರ್ಕಾರ, ಬೆಂಗಳೂರು

೩೭. ಚೆನ್ನಬಸಪ್ಪ ಎಸ್. ಪಾಟೀಲ್, ೨೦೦೨: ಕರ್ನಾಟಕದ ಕೋಟೆಗಳು, ಸಂಪುಟ- ೧ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ , ಹಂಪಿ

೩೮. ಪ್ರಭಾಕರ್ ಎಂ.ಎನ್. ೨೦೦೧ :ದೇವಾಲಯಗಳ ವಾಸ್ತು ಚಂದ್ರಿಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೯. ಮಹದೇವ. ಸಿ. ೨೦೦೦ : ಕರ್ನಾಟಕದ ಪುರಾತತ್ವ ಶೋಧ, ಶ್ರೀ ಲಕ್ಷ್ಮಿ ಪ್ರಕಾಶನ, ಶ್ರೀರಂಗಪಟ್ಟಣ

೪೦. ಮಹದೇವ.ಸಿ. ೨೦೦೦: ವಿಜಯನಗರ ಗಾರೆ ಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪೧. ಮೂರ್ತಿ ಕೆ.ಎನ್. ಎನ್., ೧೯೯೮ : ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ , ರಂಜಿತ ಪ್ರಕಾಶನ, ತುಮಕೂರು

೪೨. ರೈಸ್, ಬಿ.ಎಲ್. ೧೯೩೪ : ಎಪಿಗ್ರಫಿ ಆಫ್ ಕರ್ನಾಟಕ, ಸಂಪುಟ-೪ , ತುಮಕೂರು
ಜಿಲ್ಲೆಯ ಶಾಸನಗಳು, ಮೈಸೂರು ಸಂಬಂಧ ಕೇಂದ್ರ ಮುದ್ರಣಾಲಯ, ಬೆಂಗಳೂರು

೪೩. ಶ್ರೀನಿವಾಸ ಎ.ಡಿ. ೧೯೯೨: ಮಧುಗಿರಿ ಇತಿಹಾಸ, ಸುಧಾ ಪ್ರಕಾಶನ, ಮಧುಗಿರಿ.

೪೪. ಸುಂದರ ಅ. (ಸಂ) ೧೯೯೯: ಕರ್ನಾಟಕ ಚರಿತ್ರೆ, ಸಂಪುಟ-೧ ,ಪ್ರಸಾರಾಂಗ ಕನ್ನಡ
ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪೫. ಸುರೇಶ್‌ಕೆ.ಎಂ ವಾಸುದೇವ ಬಡಿಗೇರ ಮಡಲಗೇರಿ ಕೊಟ್ರೇಶ್ ಸೋಮಶೇಖರ್
ಎಸ್.ವೈ.೧೯೯೯: ಕರ್ನಾಟಕ ದೇವಾಲಯಗಳ ಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

<u>ಅಪ್ರಕಟಿತ ಸಂಶೋದನಾ ಪ್ರಬಂಧಗಳು</u>

೧. ಮುದ್ದವೀರಪ್ಪ ಕೆ.ವಿ., ೨೦೦೫ :ತುಮಕೂರು ಜಿಲ್ಲೆಯ ಕೋಟೆ ಕೊತ್ತಲಗಳ ಜಾನಪದೀಯ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಶಿವತಾರಕ್ ಕೆ.ವಿ., ೧೯೯೯: ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳ ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩. ತಿಪ್ಪೇಸ್ವಾಮಿ ಎಸ್,, ೨೦೦೪: ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಪತ್ರಿಕೆಗಳು ಮತ್ತು ವರದಿಗಳು

- ಹೊಸತು ಫೆಬ್ರವರಿ೨೦೦೯
- ಇತಿಹಾಸ ದರ್ಶನ - ಬೆಂಗಳೂರು, ಸಂ. ೧೬,೧೮,೧೯
- ಜಯಮಂಗಲಿ ಸ್ಮರಣ ಸಂಚಿಕೆ ೨೦೦೦
- ಅರಣ್ಯ ಇಲಾಖಾ ವರದಿ ೨೦೦೫
- ಕೃಷಿ ಇಲಾಖಾ ವರದಿ ೨೦೦೭
- ವಿಜಯಕರ್ನಾಟಕ ಆಗಸ್ಟ್, ೧೩-೨೦೦೧


ಸಂಕ್ಷೇಪ್ತಗಳು

- EC- ಎಪಿಗ್ರಾಫಿಯಾ ಕರ್ನಾಟಕ

ಆಂಗ್ಲ ಭಾಷೆಯ ಪುಸ್ತಕಗಳು

1. Abhi Shankar(Editor), 1969: Tumkur Dist. Gazzeteer, Government of Karnataka, Bangalore
2. EC- Epigraphia Carnatika Volumes
3. Francis Bukanan, 1807: A jurny from Madras truth contries of Mysore , Canara and Malbar Vol- III, London
4. Hayavadana Rao, 1984 : Mysore Gazzetteer B.R. Publishing Corporation, Delhi
5. Mysore Archaelogical Reports , 1928-1946 :Mysore
6. Rice B.L, 1867:Mysore Gazzetters, Vol. II , Mysore.
7. Suryanath U Kamath (Editor), 1986: Karnataka State Gazzetter, Part-3 Government of Karnataka, Bangalore

## ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧ | ಚಿಕ್ಕಣ್ಣ | ೩೦ | ಶಿಕ್ಷಕರು | ಮಲ್ಲೇಕಾವು |
| ೨ | ನಂಜುಂಡಯ್ಯ | ೫೩ | ಗ್ರಾಮಲೆಕ್ಕಿಗರು | ಮಲ್ಲೇಕಾವು |
| ೩ | ಕೋದಂಡರಾಮಯ್ಯ | ೪೮ | ಗ್ರಾಮಲೆಕ್ಕಿಗರು | ಮಲ್ಲೇಕಾವು |
| ೪ | ಹನುಮಂತರಾಯಪ್ಪ | ೬೦ | ವ್ಯವಸಾಯ | ಮಲ್ಲೇಕಾವು |
| ೫ | ನಂಜುಂಡಸ್ವಾಮಿ | ೫೫ | ಹವ್ಯಾಸಿ ಸಂಶೋಧಕ | ಗೌಜಗಲ್ಲು |
| ೬ | ಬೈಂಗೇಶ್ | ೪೮ | ಗ್ರಾ.ಪಂ.ಸದಸ್ಯರು | ಹೊಲತಾಳು |
| ೭ | ಭೀಮಯ್ಯ | ೬೩ | ಕೃಷಿಕ | ಹೊಲತಾಳು |
| ೮ | ದೊಡ್ಡ ನರಸಿಂಹಯ್ಯ | ೩೪ | ಕೃಷಿಕ | ಹೊಲತಾಳು |
| ೯ | ಚಂದ್ರಪ್ಪ | ೫೦ | ಕೃಷಿಕ | ಗೌಜಗಲ್ಲು |
| ೧೦ | ಸತೀಶ್ ಎಲ್ | ೨೮ | ಶಿಕ್ಷಕರು | ಕೊರಟಗೆರೆ |
| ೧೧ | ವೀರಕ್ಯಾತಯ್ಯ | ೪೮ | ವ್ಯಾಪಾರಿ | ನೇಗಲಾಲ |
| ೧೨ | ಸಿದ್ದಪ್ಪ | ೫೧ | ವಕೀಲರು | ನೇಗಲಾಲ |
| ೧೩ | ರಾಘವೇಂದ್ರ | ೨೩ | ಜಲಾನಯನ ಅ.ಇ. | ಕೊರಟಗೆರೆ |
| ೧೪ | ಪುರುಷೋತ್ತಮ | ೩೨ | ಸರ್ವೇಯರ್ | ಕೊರಟಗೆರೆ |
| ೧೫ | ರಾಮಚಂದ್ರ | ೩೦ | ವರದಿಗಾರರು | ತುಂಬಾಡಿ |
| ೧೬ | ಜನಾರ್ದನಯ್ಯ ಜಿ.ಎಸ್ | ೪೩ | ಶಿಕ್ಷಕರು | ಜುಂಜರಾಮನಹಳ್ಳಿ |
| ೧೭ | ಅಶ್ವತ್ಥಯ್ಯ | ೬೪ | ಕೃಷಿಕ | ಕೊರಟಗೆರೆ |
| ೧೮ | ನಾರಾಯಣಪ್ಪ | ೬೫ | ಕೃಷಿಕ | ಕೊರಟಗೆರೆ |
| ೧೯ | ರಂಗನಾಥ | ೨೩ | ಉಪನ್ಯಾಸಕರು | ಬಂಡೇಹಳ್ಳಿ |
| ೨೦ | ರಂಗನಾಥ | ೩೪ | ಗ್ರಾ.ಪಂ. ಸದಸ್ಯರು | ಚನ್ನರಾಯನದುರ್ಗ |
| ೨೧ | ಕಾಂತೇಶ | ೩೫ | ಉಪನ್ಯಾಸಕರು | ಚನ್ನರಾಯನದುರ್ಗ |
| ೨೨ | ಜ್ವಾಲನಾಥ್ | ೩೧ | ಶಿಕ್ಷಕರು | ತೋವಿನಕೆರೆ |



ಚನ್ನರಾಯನ ದುರ್ಗದ ಬೆಟ್ಟ



ಕೊರಟಗೆರೆ ಬೆಟ್ಟ



ಚನ್ನರಾಯನ ದುರ್ಗದ ವಿಹಂಗಮ ನೋಟ



ನೂತನ ಶಿಲಾಯುಗದ ನೆಲೆ



ನೂತನ ಶಿಲಾಯುಗದ ಕೈಗೊಡಲಿ



ಇತಿಹಾಸ ಆರಂಭಕಾಲದ ಮಡಿಕೆ ಚೂರು



ಚನ್ನರಾಯನ ದುರ್ಗ ಕೋಟೆಯ ಉಲ್ಲೇಖವಿರುವ ಶಾಸನ



16ನೇ ಶತಮಾನದ ಬಂಡೇಹಳ್ಳಿ ಶಾಸನ



ಕಾವಲ್ಲಮ್ಮ ದೇವಾಲಯದ ಸ್ಥಂಭ ಶಾಸನ


ಕೋಟೆ ವೆಂಕಟರಮಣ ದೇವಾಲಯದ ಮುಂದಿನ ಶಾಸನ


ಗೋವಿಂದಯ್ಯನ ವೀರಗಲ್ಲು


ತುಂಬಾಡಿಯ ವೀರಗಲ್ಲು



ನೇಗಲಾಲದ ಮಾಸ್ತಿಗಲ್ಲು



ಗೋವು ರಕ್ಷಣೆಯ ವೀರಗಲ್ಲು



ರಣಭೈರೇಗೌಡನ ಸಮಾಧಿ



ಚನ್ನಕೇಶವ ದೇವಾಲಯ



ತೋವಿನ ಕೆರೆ ಶ್ರೀನಿವಾಸ ದೇವಾಲಯ



ಗವಿಗಂಗಾಧರೇಶ್ವರ ದೇವಾಲಯ



ಗವಿಗಂಗಾಧರೇಶ್ವರ ದೇವಾಲಯದ ಶಿಖರ



ಕೋಟೆಯ ಈಶ್ವರ ದೇವಾಲಯ



ಕಲ್ಲಾಸರೆಯ ಗಂಗಾಧರೇಶ್ವರ ಗುಡಿ



ನಂದೀಶ್ವರ ದೇವಾಲಯ



ಮಲ್ಲೇಶ್ವರ ದೇವಾಲಯ



ಕಾವಲಮ್ಮನ ಉಯ್ಯಾಲೆ ಮಂಟಪ



ಚನ್ನರಾಯನ ದುರ್ಗಕೋಟೆಯ ದಕ್ಷಿಣ ಬಾಗಿಲು



2ನೇ ಸುತ್ತಿನ ಕೋಟೆಯ ಒಳನೋಟ



ಕೋಟೆಯ ಹೊರಭಾಗದ ಇಳಿಜಾರು



ಕೋಟೆಯ ಒಳಗೋಡೆ



ವೃತ್ತಾಕಾರದ ಬುರುಜು



ಅರಮನೆಯ ಕಟ್ಟಡಗಳು



ಕಾವಲು ಮಂಟಪಗಳು



ತುಪ್ಪದ ಕಣಜ



ಕೋಟೆ ಕೆಳಗಿನ ಮುರಾರಿ ಮಠ



ಕುಮ್ಮಿ ಕೋಟೆ



ಲಕ್ಷ್ಮಿ ಶಿಲ್ಪ



ಕೋಟೆ ವೆಂಕಟರಮಣ ಶಿಲ್ಪ



ಹೊಲತಾಳುವಿನ ನಂದಿಶಿಲ್ಪ



ಕುರಂಕೋಟೆಯ ದೊಡ್ಡಕಾಯಪ್ಪನ ಶಿಲ್ಪ



ಈಶ್ವರ ದೊಣೆ



ವೆಂಕಟರಮಣ ದೇವಾಲಯದ ಬಾವಿ



ವೆಂಕಟರಮಣ ದೇವಾಲಯದ ಪುಷ್ಕರಣಿ



ಕನ್ನೇರಮ್ಮನ ಕೆರೆಯ ನೋಟ



ಕನ್ನೇರಮ್ಮನ ಕೆರೆಯ ತೂಬು



ತುಂಬಾಡಿಯ ಹೊಸಕೆರೆ



ಅಪ್ರಕಟಿತ ತಾಳಪತ್ರ

